

ಶ್ರೀ ಪದ್ಮಾವತೀ ಮಹಿಳಾಕಾಲೇಜು ಸುವರ್ಣಜಯಂತಿ ಉತ್ಸವಗಳಲ್ಲಿ
ಮಾತನಾಡುತ್ತ ಮುಖ್ಯಮಂತ್ರಿ ಶ್ರೀ ನಾರಾಚಂದ್ರಬಾಬುನಾಯುಡು.



ಸ್ವಿಮ್ಸ್ ಆಸ್ಪತ್ರೆಯ ಸಮಾರಂಭ
ಜ್ಯೋತಿ ಬೆಳಗುತ್ತ ಮುಖ್ಯಮಂತ್ರಿ.



ಬ್ರಹ್ಮೋತ್ಸವದ ಭಿತ್ತಿಪತ್ರ ಪರಿಶೀಲನೆ.



ಸ್ವಿಮ್ಸ್ ಆಸ್ಪತ್ರೆಯ ಸಮಾರಂಭ.



ಎಸ್. ವಿ. ಡೈರಿ ಫಾರಂನಲ್ಲಿ ಮಹಾಮಂತ್ರ ಸ್ತೂಪದ ಉದ್ಘಾಟನೆ.



ತಿರುಮಲೆಯ ರಥಕ್ಕೆ ಹೈಡ್ರಾಲಿಕ್‌ಬ್ರೇಕ್ ಅಳವಡಿಕೆ
ಪ್ರಾಯೋಗಿಕ ಪರೀಕ್ಷೆ.



ಮರೆಯದಿರು ಮನವೆ ಮಾಧವನಾ ನಮ್ಮ
ದುರಿತ ದಾರಿದ್ರ್ಯವನು ಹರಿಸಿ ಪೊರುವವನ ॥ ಪ ॥

ಆಳರಿತು ಊಳಿಗವ ಕೊಂಡು ದಣಿವಂತೆ
ಮೇಲಾಗಿ ಜೀವ ಕೊಡುವ ದೇವನ
ಕಾಲಕಾಲಕೆ ಮಾಳ್ಪ ನಡೆ ತಪ್ಪು ನುಡಿ ತಪ್ಪು
ಆಲೋಚಿಸದೆ ಕರುಣಿಸುವ ಕರುಣಿಯಾ ॥ 1 ॥

ಮೂಢನಾಗಲಿ ಮತಿಯುಳ್ಳನಾಗಲಿ
ಪಾಡಿದಾಕ್ಷಣ ಭೃತ್ಯನೆಂದೊಲಿಸು
ಕೂಡಿಕೊಳ್ಳುವ ಧೊರೆಗಳಲ್ಲಿ ಹರಿಯಲ್ಲದೆ
ನಾಡಾಡಿ ಬಣಗು ಕಲ್ಲುಗಳ ಬೇಡುವರೆ ॥ 2 ॥

ಮಾನ್ಯಾರು ಅನ್ನದೇವರ ಭಜಿಸಿ ಭವಗೆದ್ದ
ರಿನ್ನಾರು ಹರಿಯೊಲುಮೆಯಲಿ ದಣಿವರು
ನಿನ್ನ ಗುರುಗಳಿಂದರಿತು ನೆರೆ ನಂಬಿದರೆ ಪ್ರ-
ಸನ್ನ ವೆಂಕಟಪತಿಯೆ ಪದವನು ಈವ ॥ 3 ॥

-ಪ್ರಸನ್ನ ವೆಂಕಟದಾಸರು.

ಸಂದರ್ಶಿಸಿ. ಆನಂದಿಸಿ.

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ
## ತಿರುಚಾನೂರು



# ವಾರ್ಷಿಕ ಬ್ರಹ್ಮೋತ್ಸವಗಳು

## 29-11-2002 ರಿಂದ 8-12-2002

### ಉತ್ಸವ ಕಾರ್ಯಕ್ರಮ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 29-11-2002 | ಶುಕ್ರವಾರ | - | ಅಂಕುರಾರ್ಪಣೆ. |
| 30-11-2002 | ಶನಿವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ. |
| 1-12-2002 | ಭಾನುವಾರ | ಟಾಂಜಾನ್ ಉತ್ಸವ | ಹಂಸವಾಹನ. |
| 2-12-2002 | ಸೋಮವಾರ | ಮುತ್ತಿನ ಚಪ್ಪರವಾಹನ. | ಸಿಂಹವಾಹನ |
| 3-12-2002 | ಮಂಗಳವಾರ | ಕಲ್ಪವೃಕ್ಷವಾಹನ | ಹನುಮಂತವಾಹನ |
| 4-12-2002 | ಬುಧವಾರ | ಪಲ್ಲಕ್ಕಿ ಉತ್ಸವ | |
| | | ಸಂಜೆ - ವಸಂತೋತ್ಸವ | ಗಜವಾಹನ. |
| 5-12-2002 | ಗುರುವಾರ | ಸರ್ವಭೂಪಾಲವಾಹನ. | ಗರುಡವಾಹನ. |
| 6-12-2002 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ. |
| 7-12-2002 | ಶನಿವಾರ | ರಥೋತ್ಸವ | ಅಶ್ವವಾಹನ. |
| 8-12-2002 | ಭಾನುವಾರ | ಚಕ್ರಸ್ನಾನ. | ಧ್ವಜಾವರೋಹಣ. |

ಸೂಚನೆ : ತಿರುಚಾನೂರಿಗೆ ಪ್ರತಿ ಐದು ನಿಮಿಷಕ್ಕೆ ಒಂದರಂತೆ ತಿರುಪತಿಯಿಂದ ಬಸ್‌ಗಳಿವೆ. ಉತ್ಸವದ ದಿನಗಳಲ್ಲಿ ದಿನವೂ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಹೆಚ್ಚಿನ ವಿವರಗಳಿಗೆ ತಮ್ಮ ಬಳಿಯ ತಿ.ತಿ.ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.

# ಸಪ್ತಗಿರಿ

ಸಂಪುಟ - 33 ನವಂಬರ್ 2002 ಸಂಚಿಕೆ - 6

## ಆಶ್ವಯುಜ - ಕಾರ್ತೀಕ ಸಂಚಿಕೆ

### ವಿಷಯಸೂಚಿ



ಮುಖಚಿತ್ರ : ಶ್ರೀ ಪದ್ಮಾವತೀದೇವಿ – ತಿರುಚಾನೂರು.

ಹಿಂಬದಿಯಲ್ಲಿ : ಪದ್ಮಸರೋವರ – ತಿರುಚಾನೂರು.

WWW.Tirumala.Com ವಿಳಾಸದಿಂದ ಇಂಟರ್‌ನೆಟ್‌ನಲ್ಲಿ ತಿ.ತಿ.ದೇ.ಗಳ ಬಗ್ಗೆ ವಿವರಗಳನ್ನು ಪಡೆಯಬಹುದು.


ಗೌರವ ಸಂಪಾದಕರು :
**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಡಾ|| ಎನ್.ಎಸ್. ರಾಮಮೂರ್ತಿ,

ಮುದ್ರಣ :
**ಐ. ಪಾರ್ವತೀಶ್ವರ ರಾವ್,**
ಬಿ.ಎ., ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್,** ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
*ಸಂಪಾದಕರು*
*ತಿರುಮಲೆ ತಿರುಪತಿ ದೇವಸ್ಥಾನಗಳು,*
*ತಿರುಪತಿ.*

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಅಜೀವ ಚಂದಾ ರೂ. 500/-**


*ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ||*

ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ । ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ॥

# ನಿಮ್ಮೊಡನೆ ಎರಡು ಮಾತು......



ಆಲಯವೆಂಬುದು ಅತಿ ಪವಿತ್ರವಾದದ್ದು. ಎಲ್ಲರಿಗೂ ಸಂಬಂಧಪಟ್ಟದ್ದು. ದೇಶದ ಯಾವುದೇ ಭಾಗದ ಯಾವ ದೇವಾಲಯವೇ ಆದರೂ ಅದು ಇಡೀ ದೇಶದ ಸಮಷ್ಟಿಗೆ ಸೇರಿದ ಆಧ್ಯಾತ್ಮಿಕ ಸಂಪತ್ತು. ಅವು ಯಾವೊಬ್ಬರ ಸ್ವಂತ ಆಸ್ತಿಯೂ ಅಲ್ಲ. ಆಲಯಗಳಿಗೆ ವಾಸ್ತವದಲ್ಲಿ ಪ್ರಜೆಗಳೇ ಧರ್ಮಕರ್ತರು. ಆಲಯಗಳ ರಕ್ಷಣೆ, ಸಂರಕ್ಷಣೆ, ಪಾಲನೆ, ಪೋಷಣೆಗಳಲ್ಲಿ ಪ್ರಜೆಗಳೇ ಪ್ರಮುಖ ಜವಾಬ್ದಾರಿ ನಿರ್ವಹಿಸಬೇಕು. ಸೇವಕರಾಗಿಯೂ ಸೈನಿಕರಂತೆಯೂ ಸಾರ್ವಜನಿಕರು ಸೂತ್ರಧಾರಿಗಳಾದಾಗಲೇ ಅನಂತವಾದ ಆಲಯಸಂಪದವನ್ನು ಭಾವಿ ಭಾರತದ ಜನಾಂಗಕ್ಕೆ ಭದ್ರವಾಗಿ ತಲುಪಿಸಬಲ್ಲವರಾಗುತ್ತೇವೆ.

ನಮ್ಮ ಸಂಸ್ಕೃತಿಗೆ, ಚರಿತ್ರೆಗೆ, ಮಾನಸಿಕ ಪ್ರಶಾಂತಿಗೆ, ಸಾಮಾಜಿಕ ಅಭಿವೃದ್ಧಿಗೆ - ಎಲ್ಲಕ್ಕೂ ಚಿಹ್ನೆಗಳೆಂದರೆ ಆಲಯಗಳು. ಆಲಯದಲ್ಲಿ ನೆಲೆಸಿರುವ ಆದಿಮಧ್ಯಾಂತರಹಿತನನ್ನು ಓಲೈಸುವುದರಿಂದ ಶಾಂತಿ ದೊರೆಯುತ್ತದೆ. ಅಗಮ್ಯಗೋಚರವಾದ ಜೀವನಾಂಧಕಾರದಲ್ಲಿ ಬೆಳಕಿನ ರೇಖೆ ಕಾಣಿಸುತ್ತದೆ.

ಈ ಕಾರಣದಿಂದಾಗಿಯೇ ಆಲಯದ ದೇವತಾ ಮೂರ್ತಿಗಳಿಗೆ ನಮಗೆ ಇಷ್ಟವಾದಂತೆ ಆಭರಣಗಳನ್ನು ತೊಡಿಸಿ ಅಲಂಕರಿಸುತ್ತೇವೆ. ಎಲ್ಲರೂ ಸೇರಿ ಉತ್ಸವಗಳನ್ನು ನಡೆಸುತ್ತೇವೆ. ಉತ್ಸವದ ಸಂಭ್ರಮದಲ್ಲಿ ಎಲ್ಲರೂ ಸೇರಿಹೋಗಿ, ಕಷ್ಟನಷ್ಟಗಳನ್ನು ಮರೆತು ಆನಂದವನ್ನು ಹಂಚಿಕೊಂಡು ನಡೆಯುತ್ತೇವೆ. ಆ ದೇವದೇವನ ಮುಂದೆ ಎಲ್ಲರೂ ಒಂದೇ ಎಂಬುದಕ್ಕೆ ಪ್ರತೀಕವೇ ಆಲಯ ಉತ್ಸವಗಳು.

ತಿರುಮಲೆ ಕಲಿಯುಗ ವೈಕುಂಠ. ಇಲ್ಲಿ ನೆಲೆಸಿದ ಶ್ರೀನಿವಾಸನು ಸಾಕ್ಷಾತ್ ವಿಷ್ಣುವೇ. ಪ್ರಾಮುಖ್ಯದಲ್ಲಿಯೂ, ಪಾವಿತ್ರ್ಯದಲ್ಲಿಯೂ ತಿರುಮಲೆಗೆ ಸಮಾನವಾದದ್ದು ತಿರುಚಾನೂರು ಎಂಬ ಅಲಮೇಲು ಮಂಗಾಪುರ. ಶ್ರೀನಿವಾಸನ ಪಟ್ಟಮಹಿಷಿಯಾದ ಶ್ರೀ ಪದ್ಮಾವತೀದೇವಿ ಇಲ್ಲಿ ನೆಲೆಸಿದ್ದಾಳೆ. ಆಕೆ ಸಾಕ್ಷಾತ್ ಲಕ್ಷ್ಮಿಯೇ. ಅಖಿಲ ಚರಾಚರ ಸೃಷ್ಟಿಗೆ ಆಕೆ ತಾಯಿ. ಭಕ್ತರು ತಿರುಮಲೆಯಲ್ಲಿ ಸ್ವಾಮಿಯನ್ನು ಕಂಡ ಬಳಿಕ ಕೆಳಗಿಳಿದು ತಿರುಚಾನೂರಿಗೆ ಬಂದು ಅಮ್ಮನವರನ್ನು ದರ್ಶಿಸಬೇಕು. ಆಗಲೇ ಅವರ ಯಾತ್ರೆ ಸಂಪೂರ್ಣವಾಗುವುದೆಂಬ ಒಂದು ನಂಬಿಕೆ ಪರಂಪರೆಯಿಂದ ನಡೆದು ಬಂದಿದೆ.

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯ ವಿಮಾನ ಗೋಪುರಕ್ಕೆ, ಆಲಯ ಗರ್ಭಗುಡಿಯ ಒಳ ಗೋಡೆಗಳಿಗೆ ಬಂಗಾರದ ಮುಲಾಮು ಹಚ್ಚಬೇಕೆಂಬುದು ತಿರುಮಲ ತಿರುಪತಿ ದೇವಸ್ಥಾನಗಳ ಸಂಕಲ್ಪ. ಈ ವಿಶ್ವದ ಸಮಸ್ತ ಸಂಪದಕ್ಕೂ ಮೂಲವಾದ ಲಕ್ಷ್ಮಿಯ ಆಲಯ ಸ್ವರ್ಣಮಯವಾಗಿ ಶೋಭಿಸಬೇಕು ಎಂಬುದು ದೇವಸ್ಥಾನದ ಆಶಯ. ಈ ಹೊಣೆ ಕೇವಲ ದೇವಸ್ಥಾನದ್ದು ಮಾತ್ರವೇ ಅಲ್ಲ; ಯಾವತ್ತೂ ಭಕ್ತ ಪ್ರಪಂಚದ ಎಲ್ಲ ಭಕ್ತರ ಹೊಣೆಯೂ ಹೌದು.

ಅಮ್ಮನವರ ಆಲಯದ ಬಂಗಾರದ ಮುಲಾಮೀಕರಣದಲ್ಲಿ ಎಲ್ಲ ಭಕ್ತರೂ ಪಾಲುಪಡೆಯಬೇಕು. ಹಿರಿಯರು, ಇದ್ದವರು. ಇರುವವರು - ತಮ್ಮ ಕೈಲಾದಷ್ಟು ವಂತಿಗೆ ಸಲ್ಲಿಸಬೇಕು. ಇಂತಹ ಅವಕಾಶ ಎಂದೋ ಒಮ್ಮೆ ಮಾತ್ರ ಬರುವಂತಹದು. ಹಾಗಾಗಿಯೇ ಎಲ್ಲರೂ ಈ ಅವಕಾಶವನ್ನು ಸದ್ವಿನಿಯೋಗ ಪಡಿಸಿಕೊಳ್ಳಬೇಕು. ಜಗತ್ಕಲ್ಯಾಣಕಾರಿಣಿ, ಸಕಲ ಸಂಪದ ಸ್ವರೂಪಿಣಿ ಆದಂತಹ ಅಮ್ಮನವರ ಆಲಯದ ಸೇವೆಯಲ್ಲಿ ಅಳಿಲುಸೇವೆ ಸಲ್ಲಿಸಿದರೂ ಆತ್ಮತೃಪ್ತಿ ಪಡೆಯಬಹುದು.

ಶ್ರೀ ಪದ್ಮಾವತೀ ಅಮ್ಮನವರ ಕಾರ್ತೀಕ ಬ್ರಹ್ಮೋತ್ಸವಗಳು ನಡೆಯುತ್ತಿರುವ ಈ ಹೊತ್ತಿನಲ್ಲಿ ನೀವು ನೀಡುವ ವಂತಿಗೆಗಳು ಮತ್ತಷ್ಟು ಪ್ರಾಮುಖ್ಯ ಪಡೆಯುತ್ತದೆ.

ಎಲ್ಲರಿಗೂ ಶ್ರೀ ಪದ್ಮಾವತೀ ದೇವಿಯ ಆಶೀರ್ವಾದ ಅನುಗ್ರಹಗಳುಂಟಾಗಲಿ ಎಂದು ಬೇಡುತ್ತ........

**ಶ್ರೀ ಪದ್ಮಾವತೀ ಚರಣೌ ಶರಣಂ ಪ್ರಪದ್ಯೇ**

ತಮ್ಮ ವಿಶ್ವಾಸಿ,

**ಡಾ॥ ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ಗುಡಿಗೋಪುರಗಳು

- ವಿದ್ವಾನ್ ಕಸ್ತೂರಿ ರಂಗರಾಜನ್.

ಗುಡಿಗೋಪುರಗಳು ಭಾರತೀಯ ಸಂಸ್ಕೃತಿಯ ಒಂದು ಸ್ಥೂಲ ರೂಪವೆಂಬುದು ನಮಗೆಲ್ಲರಿಗೂ ತಿಳಿದ ವಿಷಯವೇ. ನಮ್ಮ ದೇಶವಿರಲಿ, ಪರದೇಶಗಳಲ್ಲೂ ನಾವು ಗುಡಿ ಗೋಪುರಗಳನ್ನು ಕಾಣುತ್ತೇವೆ. ಮನುಷ್ಯನಿಗೆ ಅವುಗಳ ಅಗತ್ಯವಾದರೂ ಏನೆಂಬ ಪ್ರಶ್ನೆ ಉದ್ಭವಿಸದಿರದು. ಮನುಷ್ಯನ ರಕ್ತದಲ್ಲಿ ಸಹಜವಾಗಿಯೇ ಪಲಾಯನವಾದವು ರೂಢವಾಗಿರುತ್ತದೆ. ಇದರಿಂದಲೇ ಈ ಪ್ರಶ್ನೆಯು ಹುಟ್ಟಿಕೊಳ್ಳುವುದು. ಈ ಪ್ರಶ್ನೆಯು ಮನುಷ್ಯನಿಗೆ ಮತ್ತೊಬ್ಬ ಮನುಷ್ಯನಲ್ಲಿ ಗೌರವವಿದ್ದರೆ ಸಾಲದೇ? ನಮಸ್ಕಾರ ಮಾಡಿ ಕುಶಲವನ್ನೇಕೆ ವಿಚಾರಿಸಬೇಕು? ಪ್ರೀತಿ ಇದ್ದರೆ ಸಾಲದೇ? ಮಿತ್ರನನ್ನು ತನ್ನ ಮನೆಗೆ ಸತ್ಕಾರಕ್ಕೇಕೆ ಆಹ್ವಾನಿಸಬೇಕು? ಇತ್ಯಾದಿ ಪ್ರಶ್ನೆಗಳಂತೆಯೇ ಅರ್ಥಹೀನವಾಗುವುದು. ವಾಸ್ತವವಾಗಿ ಈ ಗುಡಿಗೋಪುರಗಳೇ ಭಾರತೀಯ ಸಂಸ್ಕೃತಿಯ ಮೂಲ ಹಾಗೂ ಕುರುಹುಗಳು. ಈ ಗುಡಿಗೋಪುರಗಳಲ್ಲಿ ಯಾವ ರೀತಿಯ ಸಂಸ್ಕೃತಿಯು ಅಡಗಿದೆ. ಕೆಲವರು ಇದನ್ನು ಕಲೆಯೆನ್ನಬಹುದು. ಈ ಕಲೆಯನ್ನು ಕಲ್ಲಿನಲ್ಲಿಯೇ ಏಕೆ ಹೊರಹೊಮ್ಮಿಸಬೇಕೆಂದು ಕೇಳಿದರೆ ಏನು ಉತ್ತರ ಸಿಗುವುದು? ನಮ್ಮ ಸಂಸ್ಕೃತಿಯ ಮೂಲವನ್ನು ಅರಿಯದೆ ಈ ಪ್ರಶ್ನೆಗಳಿಗೆ ಉತ್ತರಿಸುವುದು ಶ್ರಮಸಾಧ್ಯದ ವಿಚಾರ ವಾಗುವುದು.

ಭಾರತ ದೇಶದ ವೈಶಿಷ್ಟ್ಯದ ಕಡೆಗೆ ಕಣ್ಣು ಹಾಯಿಸಿದರೆ ಮಾತ್ರ ಸಹಜದ ಮತ್ತು ಸಮಾಧಾನಕರವಾದ ಸ್ವಲ್ಪವಿಚಾರವು ನಮ್ಮ ಮುಂದೆ ಬರುವುದು. ಭಾರತದಲ್ಲಿ ಸಾವಿರಾರು ವರ್ಷಗಳ ಅತಿ ಪ್ರಾಚೀನವಾದ ದೇವಾಲಯಗಳನ್ನು ಕಾಣುತ್ತೇವೆ. ಅವುಗಳನ್ನು ನಿರ್ದಿಷ್ಟವಾದ ರಾಜ, ಮಹಾರಾಜರು ಕಟ್ಟಿಸಿದ್ದರೆಂದು ಶಾಸನಗಳು ನಿಷ್ಕರ್ಷಿಸಿವೆ. ಆದರೆ ಆ ರಾಜ ಮಹಾರಾಜರುಗಳ ಅರಮನೆಗಳು ಏನಾದವು? ಅತ್ಯಂತ ಹಳೆಯ ಅರಮನೆಗಳು ಮತ್ತು ಅವುಗಳ ಅವಶೇಷಗಳು ಲೇಶವೂ ಕೂಡ ಎಲ್ಲಿಯೂ ಉಳಿದಿಲ್ಲ. ನಾವು ನೋಡ ಬಹುದಾದ ಕೋಟೆ ಕೊತ್ತಲಗಳು ಹೆಚ್ಚೆಂದರೆ 300-400 ವರ್ಷಗಳಿಗಿಂತ ಈಚಿನವಷ್ಟೇ. ಇದಕ್ಕೆ ಕಾರಣವೂ ಅತಿಸುಲಭ ಹಾಗೂ ಸಮಂಜಸ. ರಾಜಮಹಾರಾಜರು ದೇವರ ಗುಡಿಗೋಪುರ ಗಳನ್ನು ಕಟ್ಟುವಲ್ಲಿ ತೋರಿದ ಆಸಕ್ತಿ, ಆದ್ಯತೆ, ಧರ್ಮಪ್ರಜ್ಞೆಯು ತಮ್ಮ ವಾಸಸ್ಥಾನವನ್ನು ಕಟ್ಟಿಕೊಳ್ಳುವಲ್ಲಿ ತೋರಲಿಲ್ಲ ಎಂಬುದು. ಪ್ರಾಯಃ ಅವರ ಅಧಿಕೃತ ವಹಿವಾಟುಗಳನ್ನು ಅವರು ದೇವರ ಸನ್ನಿಧಿಗಳಲ್ಲೇ ನಡೆಸುತ್ತಿದ್ದರೆಂದು ಊಹಿಸಲಾಗಿದೆ.

ಭಾರತದ ಉತ್ತರ ಮತ್ತು ದಕ್ಷಿಣ ದೇಶಗಳಲ್ಲಿ ಇರುವ ಸಹಸ್ರಾರು ಗುಡಿಗೋಪುರಗಳ ವಿನ್ಯಾಸ ಮತ್ತು ಕಲಾವೈಭವವು ಒಂದಕ್ಕೊಂದು ಭಿನ್ನವಾಗಿದ್ದರೂ ಭಾರತೀಯ ಸಂಸ್ಕೃತಿಯ ಚೌಕಟ್ಟಿನಲ್ಲಿಯೇ ಇವು ವಿರಾಜಿಸುತ್ತಿವೆ. ಜನರಲ್ಲಿ ಆಸ್ತಿಕತೆ, ಧರ್ಮಪ್ರಜ್ಞೆ ತಮ್ಮ ಆಚಾರ ವಿಚಾರಗಳಲ್ಲಿ ಏರ್ಪಡುವ ಭಯದ ನಿವಾರಣೆ ಮತ್ತು ಜಾಗೃತಿಗೆ ಹಾಗೂ ಭಕ್ತಿಯ ಉತ್ಥಾನಕ್ಕೆ ಈ ಗೋಪುರಗಳು ಸಾಕ್ಷೀಭೂತವಾಗಿವೆ. ಆರ್ಷೇಯವಾದ ಭಾರತೀಯ ಸಂಸ್ಕೃತಿ ಸಭ್ಯತೆಯ ಪ್ರತಿಬಿಂಬಗಳು ಈ ಗೋಪುರಗಳೇ ಆಗಿವೆ. ಭಾರತೀಯರಾಗಿ ಯಾವ ಮತದವರೇ ಆಗಲಿ, ದೇವರನ್ನು ನೆನೆಯಲು ಮತ್ತು ಒಂದು ರೀತಿಯ ದಿವ್ಯವಾದ ಹಾಗೂ ಅಲೌಕಿಕವಾದ ಸದ್ಭಾವನೆಯನ್ನು ಪಡೆಯಲು ಮಾರ್ಗ ಬಿಂದುವಾಗಿರುವುದು, ಧರ್ಮದ ಉಗಮ ಸ್ಥಾನವಾದ ಗೋಪುರಗಳೇ ಆಗಿವೆ.





ಕರ್ನಾಟಕದ ಹೊಯ್ಸಳ, ಕದಂಬ ಚಾಳುಕ್ಯರಾಜರುಗಳು ತಮಿಳುನಾಡಿನ ಪಲ್ಲವ ಚೋಳ, ಪಾಂಡ್ಯರಾಜರುಗಳು ದೈವೀಕ ಸಂಸ್ಕೃತಿಯ ಉತ್ಥಾನಕ್ಕೆ ಅವರ ಕೊಡುಗೆಗಳು. ಅನಂತ ಅದ್ಭುತ ಹಾಗೂ ಅನ್ಯಾದೃಶವಾದವು ಕರ್ನಾಟಕದಲ್ಲಿ ಹಲವೆಡೆ, ಕಾಂಚೀ, ಶ್ರೀರಂಗ ಚಿದಂಬರ ಮಧುರೆ ಮುಂತಾದ ಕೆಲವೆಡೆಗಳಲ್ಲಿ ಈ ರಾಜರುಗಳು ನಿರ್ಮಿಸಿದ ಬೃಹತ್ ದೇವಾಲಯಗಳು ಇಂದಿಗೂ ಸ್ಮಾರಕವಾಗಿ ಉಳಿದಿರುವುದೇ ಹೊರತು ಈ ರಾಜರುಗಳ ಅರಮನೆಗಳ ಕುರುಹು, ಲವಕೇಶವೂ ಕಾಣಸಿಗುವುದಿಲ್ಲ. ತಮ್ಮ ಭೋಗ, ವಿಲಾಸೀ ಜೀವನಕ್ಕಿಂತ ದೇವರಲ್ಲೇ ಮತ್ತು ದೇವತಾಕಾರ್ಯದಲ್ಲೇ ತಮಗೆ ಸುಖ, ಶಾಂತಿ ಸಂತೋಷವನ್ನು ತಂದುಕೊಂಡು ಜೀವನ ಸಾರ್ಥಕ್ಯವನ್ನೂ, ಅಜರಾಮರತೆಯನ್ನು ಕಂಡುಕೊಂಡ ಈ ರಾಜರುಗಳಿಂದ ನಮ್ಮ ಸಂಸ್ಕೃತಿಯ ಹಿರಿಮೆಯು ವ್ಯಕ್ತವಾಗುತ್ತದೆ. ಈ ದಿಸೆಯಲ್ಲಿ ಕರ್ನಾಟಕದ ಮೈಸೂರರಸರ ಕೊಡುಗೆಯೂ ಅಪಾರ. ಒಬ್ಬನಿಷ್ಠ ಜೈನಮತಾನುಯಾಯಿಯಾದ ಮಹಾರಾಜ ಬಿಟ್ಟಿದೇವನು ಕರ್ನಾಟಕದ ಮೇಲು ಕೋಟೆಯಲ್ಲಿ ಬೃಹತ್ತಾದ ದೇವಾಲಯ ವೊಂದನ್ನೂ, ಗಗನ ಚುಂಬಿ ಗೋಪುರವನ್ನೂ ರಾಜಗೋಪುರವನ್ನೂ ಕಟ್ಟಿಸಿಕೊಟ್ಟನೆಂದರೆ ನಮ್ಮ ಭಾರತೀಯ ಸಂಸ್ಕೃತಿಯ ಪ್ರಭಾವ ಎಷ್ಟಿರಬಹುದು-ಅಳೆಯಲು ಸಾಧ್ಯವೇ? ಸಂಸ್ಕೃತಿಯು ಅರ್ಥಪೂರ್ಣವಾಗುವುದು ದೈವಸಾನ್ನಿಧ್ಯದಲ್ಲೇ ಹೊರತು ತೋರಿಕೆಯಲ್ಲ.

ಹೊಟ್ಟೆಗಿಲ್ಲದವನಿಗೆ ಯಾವ ಸಂಸ್ಕೃತಿಯೂ ಬೇಕಾಗಿರುವುದಿಲ್ಲ. ದೇಶದ ಸಂಪತ್ ಸಮೃದ್ಧಿಯ ಲಕ್ಷಣವು ತ್ಯಾಗವೇ ಹೊರತು ಭೋಗವಲ್ಲ. ಇದೇ ಭಾರತೀಯ ಸಂಸ್ಕೃತಿಯ ತಳಪಾಯ, ತಾಯಿಯು ತನ್ನ ಮಗುವನ್ನು ಪೋಷಿಸುವಾಗ, ತಾನು ಆ ಮಗುವಿನಿಂದ ಅನುಭವಿಸುವ ಪ್ರೀತ್ಯಾದರದ ಪೀಡನೆ, ಕಷ್ಟಕೋಟಲೆಗಳಲ್ಲೇ ಸುಖವನ್ನು ಅವಳು ಕಾಣುವಂತೆ, ಭಾರತೀಯ ಸಂಸ್ಕೃತಿಯು ಹಿರಿಮೆಯು ತ್ಯಾಗದ ಅಜರಾಮರತೆಯನ್ನು ಹೊರಸೂಸುವುದೇ ಹೊರತು ಭೋಗದಲ್ಲಲ್ಲ. ಭೋಗದಲ್ಲಿ ಸುಖವನ್ನು ಕಾಣುವುದು ಆಸುರೀ ಸಂಪತ್ತೆಂದು ಭಗವದ್ಗೀತೆಯು ಸಾರುತ್ತದೆ.

ಅನೇಕ ಚಿತ್ತ ವಿಭ್ರಾಂತಾ
ಮೋಹಜಾಲ ಸಮಾವೃತಾಃ
ಪ್ರಸಕ್ತಾಃ ಕಾಮಭೋಗೇಷು
ಪತಂತಿ ನರಕೇಽಶುಚ

ಅಧ್ಯಾಯ 16 ಶ್ಲೋಕ 16.

ತ್ಯಾಗದಲ್ಲಿ ಸುಖವನ್ನು ಕಾಣಬೇಕಿದ್ದರೆ ನಿರುಪಾಧಿಕವಾದ ಪ್ರೇಮವಿರಬೇಕು. ಇದನ್ನು ನಾವು ಜನ್ಮಕೊಟ್ಟ ತಾಯಿಯಲ್ಲಿ ಕಾಣುತ್ತೇವೆ. ಭಗವಂತನಲ್ಲಿ ನಿರುಪಾಧಿಕವಾದ ಪ್ರೇಮು ಬೆಳೆದರೆ, ತತ್ಪರಿಣಾಮವಾಗಿ ಉಂಟಾಗುವ ತ್ಯಾಗದ ಸಂಕೇತವೇ ಪವಿತ್ರವಾದ ದೇವಾಲಯಗಳು ಮತ್ತು ಗುಡಿಗೋಪುರಗಳು. ತ್ಯಾಗವಿಲ್ಲದಿದ್ದಲ್ಲಿ ಈ ಗುಡಿಗೋಪುರಗಳನ್ನು ನಿರ್ಮಿಸಲು ಸಾಧ್ಯವಾಗುತ್ತಿತ್ತೇ? ತನ್ನಲ್ಲಿ ಅಡಗಿರುವ ಕಲ್ಪನಾಶಕ್ತಿ, ಶಿಲ್ಪಿಯಚಾತುರ್ಯದ ಪ್ರದರ್ಶನಕ್ಕಿಂತ ಶಿಲ್ಪಿಯಲ್ಲಿ ಏರ್ಪಡುವ ಧರ್ಮದ ಚಿಂತನೆ, ಮತ್ತು ಭಾವನೆ ಹಾಗೂ ಭಕ್ತಿಪೂರಿತವಾದ ಅಪಾರ ಶ್ರದ್ಧೆಗೆ ಪ್ರತ್ಯಕ್ಷ ಪ್ರಮಾಣವು ಈ ಗುಡಿಗೋಪುರಗಳೇ ಆಗಿವೆ.

ತಂಜಾವೂರಿನ ಬೃಹದೇಶ್ವರ ದೇವಾಲಯದ ವಿಮಾನದ ತುದಿಯಲ್ಲಿ ಇಟ್ಟಿರುವ ಸುಮಾರು 48 ಟನ್ನಿನಷ್ಟು ತೂಕವಿರುವ ಒಂದೇ ಕಲ್ಲಿನ ಶಿಖರವನ್ನು ಅಷ್ಟು ಎತ್ತರಕ್ಕೆ ಹೇಗೆ ಏರಿಸಲು ಸಾಧ್ಯವಾಗುತ್ತಿತ್ತು? ಕರ್ನಾಟಕದ ಮೇಲು ಕೋಟೆಯಲ್ಲಿ ಪಂಥದ ಮೇರೆಗೆ ರಾತ್ರಿಯ ಊರಿನ ಶಬ್ದ ನಿಂತಮೇಲೆ ಕೋಳಿ ಕೂಗುವುದರೊಳಗೆ ಒಂದೇ ರಾತ್ರಿಯಲ್ಲಿ ಅಪೂರ್ಣವಾಗಿದ್ದರೂ ಅನ್ಯಾದೃಶವಾದ ರಾಯಗೋಪುರವನ್ನು ಕಟ್ಟಲು ಹೇಗೆ ಸಾಧ್ಯ ವಾಗುತ್ತಿತ್ತು? ಅಂತೆಯೇ ವಿಜಯನಗರದರಸರು ಗೋಪುರವೊಂದನ್ನು ಕಟ್ಟಲು ಪ್ರಾರಂಭಿಸಿ ಅಸ್ತಿವಾರದೊಂದಿಗೆ ನಿಂತುಹೋಗಿದ್ದ; ಮೊಟ್ಟೆ ಗೋಪುರಂ ಎಂದು ಪ್ರಸಿದ್ಧಿ ಪಡೆದಿದ್ದ ತಿರುಚಿರಾಪಲ್ಲಿ ಶ್ರೀರಂಗದ ಶ್ರೀರಂಗನಾಥನ ಆಲಯದ ಪ್ರಧಾನಗೋಪುರವನ್ನು ಇತ್ತೀಚೆಗೆ ಅಹೋಬಿಲಮಠದ 44 ನೇ ಪೀಠಾಧಿಪತಿ ಗಳಾದ ಶ್ರೀ ವೇದಾಂತದೇಶಿಕ ಯತೀಂದ್ರ ಮಹಾದೇಶಿಕನ್‌ರವರು ಏಷ್ಯಾಖಂಡದಲ್ಲೇ ಅತಿ ಎತ್ತರದ ಗೋಪುರವೆಂಬ ಹೆಗ್ಗಳಿಕೆಗೆ ಪಾತ್ರರಾಗುವಂತೆ ನಿರ್ಮಾಣ ಮಾಡಿದುದರ ಸಾಧನೆಯು ಸಾಧ್ಯವಾದರೂ ಹೇಗೆ? ಕಳೆದೆರಡು ವರ್ಷಗಳಲ್ಲಿ ಮೈಸೂರಿಲ್ಲಿ ಸಾಧನಾಪುರುಷರಾದ ಶ್ರೀ ಗಣಪತಿ ಸಚ್ಚಿದಾನಂದ ಸ್ವಾಮಿಯವರು ಅನ್ಯಾದೃಶವಾದ ಶ್ರೀನಿವಾಸನ ದೇವಾಲಯವೊಂದನ್ನು ಕಟ್ಟಿ ಅದಕ್ಕೆ ಅದ್ಭುತವಾದ ರಾಜಗೋಪುರವನ್ನು ಕಟ್ಟಿದ್ದಾದರೂ ಹೇಗೆ ? ಅಂತೆಯೇ ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿ ನೆಲೆಸಿರುವ ಹಲವು ಮಠಾಧಿಪತಿಗಳು ಹತ್ತು ಹಲವಾರು ಗೋಪುರಗಳ ನಿರ್ಮಾಣ ಮತ್ತು ದೇವಾಲಯ ಜೀರ್ಣೋದ್ದಾರಣ ಕಾರ್ಯ ನಡೆಸಲು ಸಾಧ್ಯವಾದುದಾದರೂ ಹೇಗೆ?

ಒಟ್ಟಿನಲ್ಲಿ ತಮ್ಮ ದ್ವೇಷಾಸೂಯೆಗಳನ್ನು ದೂರವಿರಿಸಿ ಅವರವರಿಗೆಂದು ಏರ್ಪಟ್ಟ ಧರ್ಮದ ಆಚರಣೆಯಿಂದ, ತ್ಯಾಗ, ಕಾರ್ಯಸಾಧನೆಯ ಫಲ, ನಮ್ಮ ಜನರಲ್ಲಿ ಗುಪ್ತವಾಗಿ ಅಡಗಿರುವ ಅಮೂಲ್ಯವಾದ ಕಲಾಸಂಪತ್ತಿನ ಜ್ಞಾನ ಮತ್ತು ಅದಕ್ಕೆ ಅವಕಾಶ, ಸಾಹಸಪ್ರವೃತ್ತಿ, ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ಕಲಾರಾಧನೆಯಿಂದ ಕೂಡಿದ ಪಾವಿತ್ರ್ಯತೆ ಈ ಎಲ್ಲ ಅಂಶಗಳು ಎದ್ದುಕಾಣಲು ಅಲ್ಲಲ್ಲಿ ಸಾಕ್ಷೀಭೂತನಾಗಿ ನಿಂತಿರುವುವೇ ಈ ಗುಡಿಗೋಪುರಗಳು. ಇಹಲೋಕದಲ್ಲಿ ಚೇತನರ ಕ್ಲೇಶ, ಕಷ್ಟಕಾರ್ಪಣ್ಯತೆಯನ್ನು ದೂರಮಾಡಿ ಹಿತ ಸುಖ, ಸಂತೋಷ, ಶಾಂತಿ, ಸಮಾಧಾನದ ಸಾರ್ಥಕ ಜೀವನ ನಡೆಸಿ ಕೃತಕೃತ್ಯತೆಯನ್ನು ಪಡೆದು; ಕೊನೆಗೆ ಮುಕ್ತಿ ಸಾಮ್ರಾಜ್ಯಕ್ಕೆ ದಾರಿಮಾಡಿ ಕೊಡಲು ಕೈಚಾಚಿ ಕರೆಯುವ ಏಕೈಕ ಸಾಧನವು ಗುಡಿಗೋಪುರಗಳೇ ಆಗಿವೆ.

★★★★★



ಶಿರ ನಿನ್ನ ಪಾದಕ್ಕೆ ಎರಗಲಿ.

# ಶೃಂಗೇರಿ

ಅಣ್ಣಾಸ್ವಾಮಿ ಮೊದಲಿಯಾರ್

ಶೃಂಗೇರಿ ಕರ್ನಾಟಕರಾಜ್ಯದ ಗಳಲ್ಲೊಂದು. ವಿಶ್ವದಲ್ಲಿಯೇ ಸುಸಂಸ್ಕೃತ, ಸಮೃದ್ಧ ಸಾಮ್ರಾಜ್ಯವೆಂಬ ಖ್ಯಾತಿಗಳಿಸಿದ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಬುನಾದಿ ಹಾಡಿದ ತಪೋ ಭೂಮಿ - ಈ ಶೃಂಗೇರಿ.

ಮಲ್ಲಿಕಾಫರನ ಧಾಳಿಯಿಂದ ಹಿಂದೂ ಧರ್ಮವು ಪ್ರಕ್ಷುಬ್ಧಗೊಂಡಿದ್ದ ಕಾಲದಲ್ಲಿ ಈ ತಪೋಭೂಮಿ 'ಹಿಂದೂ ಸಾಮ್ರಾಜ್ಯ' ಕಟ್ಟುವ ವೀರಭೂಮಿಯಾಯಿತು. ಶೃಂಗೇರಿ ಮಠದ ಶ್ರೀ ವಿದ್ಯಾತೀರ್ಥರು ಹದಿಮೂರನೇ ಶತಮಾನದಲ್ಲಿ 'ಹಿಂದೂ ಸಾಮ್ರಾಜ್ಯ' ಸ್ಥಾಪನೆಗೆ ತಮ್ಮ ತಪೋಶಕ್ತಿಯನ್ನುನೀಡಲು ಸಂಕಲ್ಪ ಮಾಡಿದರು.

ಇವರು ಭಾರತದೇಶವನ್ನೆಲ್ಲಾ ಸಂಚರಿಸಿದರು. ಭಾರತದೇಶದಲ್ಲೆಲ್ಲೂ ಬಲಾತ್ಕಾರ, ಮತಾಂತರ, ಕೊಲೆ, ಲೂಟಿ, ಸುಲಿಗೆ ನಡೆಯುತ್ತಿರುವುದನ್ನು ಗಮನಿಸಿದರು. ಹಿಂದೂ ರಾಜರು ಪರಸ್ಪರ ಹೊಡೆದಾಟದಲ್ಲಿ ತೊಡಗಿದ್ದರು. ಇವುಗಳನ್ನು ಕಂಡು ಅವರ ಮನಸ್ಸು ಪರಿತಪಿಸಿತು. ಹಿಂದೂ ರಾಜ್ಯಸ್ಥಾಪನೆಗೆ ಸಂಕಲ್ಪಮಾಡಿದರು-ತಮ್ಮ ಶಿಷ್ಯರಲ್ಲಿ ದೇಶಾಭಿಮಾನ, ಧರ್ಮಾಭಿಮಾನ ಮೂಡಿಸಿದರು. ಅವರ ಶಿಷ್ಯರಲ್ಲಿ ಪ್ರಮುಖರು, ಭಾರತಿ ತೀರ್ಥರು ಮತ್ತು ವಿದ್ಯಾರಣ್ಯರು.

ಭಾರತಿ ತೀರ್ಥರು, ವಿದ್ಯಾತೀರ್ಥರ ನಂತರ ಶೃಂಗೇರಿ ಮಠಾಧಿಪತಿಗಳಾದರು. ವಿದ್ಯಾರಣ್ಯ ತೀರ್ಥರು, ತಮ್ಮ ತಪಃ ಶಕ್ತಿ, ಸಂಘಟನಾಶಕ್ತಿ ಮತ್ತು ಪಾಂಡಿತ್ಯದಿಂದ ಹಿಂದೂ ಸಾಮ್ರಾಜ್ಯ ಕಟ್ಟುವ ಸಂಕಲ್ಪದಿಂದ ಹಂಪೆಯಲ್ಲಿ ನೆಲಸಿದರು. ಅಲ್ಲಿ ಹಕ್ಕ - ಬುಕ್ಕರ ಭೇಟಿಯಾಗಿ ಅವರನ್ನು ಹುರಿದುಂಬಿಸಿ, ರಾಜನೀತಿ ಬೋಧಿಸಿ, ಅನೇಕ ಸಾಂಗಿ ಕನ್ನಡ ವೀರರನ್ನು ಸಂಘಟಿಸಿ, ಪಾಳೆಗಾರರನ್ನು ಒಟ್ಟು ಗೂಡಿಸಿ, ಶುಭಮುಹೂರ್ತದಲ್ಲಿ 'ವಿಜಯನಗರ' ಸಾಮ್ರಾಜ್ಯ ಸ್ಥಾಪಿಸಿದರು.

ಶೃಂಗೇರಿ ಚಿಕ್ಕಮಗಳೂರು ಜಿಲ್ಲೆಯಲ್ಲಿದೆ, ಇದು ಋಷಿಗಳ ತವರೂರಾಗಿತ್ತು. ಕಶ್ಯಪ ಮಹರ್ಷಿಯ ಮಗ ವಿಭಾಂಡಕರು ಇಲ್ಲಿ ತಪಸ್ಸು ಮಾಡುತ್ತಿದ್ದರು. ಪ್ರಭಾಂಡಕರು ಇವರ ಸಹೋದರ. ವಿಭಾಂಡಕರು ತಪಸ್ಸಿಗೆ ಹೋದಾಗ ಪ್ರಭಾಂಡಕರು ಆಶ್ರಮವನ್ನು ನೋಡಿಕೊಳ್ಳುತ್ತಿದ್ದರು. ವಿಭಾಂಡಕರು ತಮ್ಮ ತಪಸ್ಸು ಮುಗಿಸಿಕೊಂಡು ತಮ್ಮ ಆಶ್ರಮಕ್ಕೆ ಬಂದರು. ಆದರೆ ಪ್ರಭಾಂಡರ ಮಡದಿಗೆ ವಿಭಾಂಡಕರು ಬಂದದ್ದು ಇಷ್ಟವಾಗಲಿಲ್ಲ. ಇದನ್ನರಿತ ವಿಭಾಂಡಕರು ಬೇರೆ ಆಶ್ರಮ ಕಟ್ಟಿಕೊಂಡು ತಪಸ್ಸಿನಲ್ಲಿ ತೊಡಗಿದರು. ಊರ್ವಶಿ ಇವರಲ್ಲಿ ಮೋಹಗೊಂಡಳು. ಇವರಿಬ್ಬರಿಗೆ ಒಂದು ಗಂಡು ಮಗು ಜನಿಸಿತು. ಮಗುವಿನ ತಲೆಯಲ್ಲಿ ಜಿಂಕೆಯ ಕೊಂಬಿತ್ತು. ಆದ್ದರಿಂದ ಮಗುವಿಗೆ 'ಋಷ್ಯಶೃಂಗ' ಎಂದು ಹೆಸರಿಟ್ಟರು.

ಮಗು ಜನನವಾದ ಮೇಲೆ ಊರ್ವಶಿ ದೇವಲೋಕಕ್ಕೆ ತೆರಳಿದಳು. ವಿರಹದಿಂದ ಪರಿತಪಿಸಿದ ವಿಭಾಂಡಕರು ಸ್ತ್ರೀದ್ವೇಷಿಗಳಾದರು. ತಮ್ಮ ಆಶ್ರಮದಲ್ಲಿ ಸ್ತ್ರೀಯರಿಗೆ ಪ್ರವೇಶವಿಲ್ಲದಂತೆ ಕಟ್ಟಪ್ಪಣೆ ಮಾಡಿದರು.

ಋಷ್ಯಶೃಂಗರು ವಟುಗಳ ಆರೈಕೆಯಲ್ಲಿ ಬೆಳೆದರು. ವಿಭಾಂಡಕರಿಂದ ವೇದಾಧ್ಯಯನ ಮಾಡಿದರು. ಪ್ರಾಪ್ತವಯಸ್ಕರಾದರು. ಅವರು ಹೆಣ್ಣನ್ನು ನೋಡೇ ಇರಲಿಲ್ಲ. ಶೃಂಗೇರಿಗೆ ಸಮೀಪದಲ್ಲಿ ಅಂಗರಾಜ್ಯವಿತ್ತು. ಆ ರಾಜ್ಯದಲ್ಲಿ ಹನ್ನೆರಡು ವರ್ಷಗಳಕಾಲ ಕ್ಷಾಮ ಬಂದಿತು. ಕುಡಿಯಲು ನೀರಿಲ್ಲದೆ ತಿನ್ನಲು ಆಹಾರವಿಲ್ಲದೆ ಪ್ರಜೆಗಳು ಕಂಗೆಟ್ಟರು. ಮಹಾರಾಜ ರೋಮಪಾದ ದಾರಿಕಾಣದೆ ಪರಿತಪಿಸಿದ.







ತಪಸ್ವಿಗಳು ಮಹಾರಾಜರೋಮಪಾದನ ಬಳಿಗೆ ಬಂದು ಋಷ್ಯಶೃಂಗ ಋಷಿಯನ್ನು ರಾಜ್ಯದೊಳಗೆ ಕರೆತಂದರೆ ಮಳೆ - ಬೆಳೆಯಾಗುವುದೆಂದು ತಿಳಿಸಿದರು. ಕರೆತರುವವರು ಯಾರು? ರೋಮಪಾದನ ಮಗಳು 'ಶಾಂತ' ತಾನು ಋಷ್ಯಶೃಂಗರನ್ನು ಕರೆತರುವುದಾಗಿ ತಿಳಿಸಿ ಸಖಿಯರೊಡನೆ ವಿಭಾಂಡಕರ ಆಶ್ರಮಕ್ಕೆ ಹೋದಳು. ಅವರು ಋಷಿಕುಮಾರರಂತೆ ವೇಷ ಧರಿಸಿದರು. ವಿಭಾಂಡಕರು ಆಶ್ರಮದಲ್ಲಿರಲಿಲ್ಲ. ಋಷ್ಯಶೃಂಗರು ಅತಿಥಿಗಳನ್ನು ಉಪಚರಿಸಿದರು. ಶಾಂತ ರಾಜಕುಮಾರಿ, ಸಂಗೀತ ನೃತ್ಯ ಆಟಪಾಟಗಳಿಂದ ಋಷ್ಯಶೃಂಗರನ್ನು ರಂಜಿಸಿದರು. ಅವರನ್ನು ಮರುಳು ಮಾಡಿ ರೋಮಪಾದನ ಅಂಗರಾಜ್ಯಕ್ಕೆ ಕರೆತಂದರು. ರಾಜ್ಯದಲ್ಲೆಲ್ಲೂ ಮಳೆಯಾಗಿ, ಬೆಳೆಯಾಗಿ ಸುಖ - ಸಂತೋಷ, ಸಂಭ್ರಮ ವಾತಾವರಣ ಮೂಡಿತು.

ರೋಮಪಾದನ ಬಂಧು ದಶರಥ ಮಹಾರಾಜ. ಅವನ ಕೋರಿಕೆಯಂತೆ ಅಯೋಧ್ಯೆಗೆ ಹೋಗಿ ದಶರಥನಿಂದ ಪುತ್ರಕಾಮೇಷ್ಟಿಯಾಗ ಮಾಡಿಸಿದರು ಋಷ್ಯಶೃಂಗರು. ಶಾಂತ ರಾಜಕುಮಾರಿಯನ್ನು ಋಷ್ಯಶೃಂಗರು ಮದುವೆಯಾದರು. ತಮ್ಮ ಪತ್ನಿ ಸಮೇತರಾಗಿ ಶೃಂಗೇರಿಗೆ ಬಂದು ನೆಲಸಿದರು. ವಿಭಾಂಡಕರು ಮಲಹಾನಿಕೇಶ್ವರನಲ್ಲಿ ಐಕ್ಯವಾದರು. ಋಷ್ಯಶೃಂಗರೂ - ಅವರಪತ್ನಿ ಶಾಂತದೇವಿಯೂ 'ಕಿಗ್ಗ' ಎಂಬಲ್ಲಿ ನೆಲೆಸಿದರು. ಇದು ಶೃಂಗೇರಿ ಬೆಟ್ಟದಮೇಲಿರುವ ಒಂದು ಭಾಗ. ಬಹುಕಾಲ ತಪಸ್ಸು ಮಾಡಿ ಶ್ರೀ ನರಸಿಂಹಸ್ವಾಮಿಯಿಂದ ''ಓಂ ನಮಃ ಶಿವಾಯ'' ಮಂತ್ರೋಪದೇಶಪಡೆದು ಶಿವನನ್ನು ಒಲಿಸಿಕೊಂಡು ಶಿವನಲ್ಲಿ ಐಕ್ಯವಾದರು.

ಇಂದಿಗೂ ಕಿಗ್ಗದಲ್ಲಿ ಬೃಹತ್ ದೇವಾಲಯವಿದೆ. ಋಷ್ಯಶೃಂಗೇಶ್ವರ ದೇವಾಲಯದಲ್ಲಿ ಲಿಂಗದಲ್ಲಿ ಋಷ್ಯಶೃಂಗರ ಕೊಂಬು, ಶಾಂತದೇವಿಯ ತಲೆಕೂದಲು ಚಿಹ್ನೆಗಳಿವೆ.

'ಮಾರ್ಕಲ'ನೆಂಬ ಪಾಳೆಗಾರನು 'ಕಿಗ್ಗ' ಪ್ರದೇಶವನ್ನು ಆಳಿದಕಾರಣ 'ಕಿಗ್ಗ'ಕ್ಕೆ ಮಾರ್ಕಲವೆಂಬ ಹೆಸರೂ ಇದೆ. 'ಕಿಗ್ಗ' ಪ್ರದೇಶದಲ್ಲಿ ವಿಭಾಂಡಕರು ಸ್ತ್ರೀಯರ ಪ್ರವೇಶಕ್ಕೆ ನಿಷಿದ್ಧ ಮಾಡಿದ್ದ ಕಾರಣ, ಈ ಊರಲ್ಲಿ ನೆಲಸಿದ ಸ್ತ್ರೀಯರು ಅನಾರೋಗ್ಯದಿಂದ ನರಳುತ್ತಿದ್ದರು. ಶೃಂಗೇರಿ ಮಠಾಧಿಪತಿಗಳಾದ ಚಂದ್ರಶೇಖರ ಭಾರತಿಯವರ ಬಳಿ ವಿಪ್ರರು ಮೊರೆ ಹೋದರು. ಸ್ವಾಮಿಗಳು ಕಿಗ್ಗದಲ್ಲಿ ಶಾಂತದೇವಿ ದೇವಾಲಯ ಸ್ಥಾಪಿಸಿದರು. ಅಂದಿನಿಂದ ಸ್ತ್ರೀಯರ ಬಾಧೆಗಳು ನಿವಾರಣೆಯಾದವು.

ಋಷ್ಯಶೃಂಗರ ಹೆಸರಿನಲ್ಲಿ ಈ ಗಿರಿಗೆ ಋಷ್ಯಶೃಂಗಗಿರಿ - ಶೃಂಗಪುರ - ಶೃಂಗಗಿರಿ - ಶೃಂಗೇರಿ ಎಂಬ ಹೆಸರುಗಳು ಬಂದವು.

ಬೌದ್ಧ ಧರ್ಮದ ಪ್ರಭಾವದಿಂದ ಹಿಂದೂ ಧರ್ಮ ತನ್ನ ಶೋಭೆಯನ್ನು ಕಳೆದು ಕೊಂಡಿತು. ಜೊತೆಗೆ ವಿದೇಶೀಯರ ಆಕ್ರಮಣದಿಂದ ದೇಶದಲ್ಲಿ ಧರ್ಮಕ್ಷೋಭೆಯುಂಟಾಗಿತ್ತು.

ಕೇರಳದ 'ಕಾಲಟಿ' ಎಂಬಲ್ಲಿ ಶಂಕರಾಚಾರ್ಯರು ಜನಿಸಿದರು. ಅತಿಚಿಕ್ಕ ವಯಸ್ಸಿನಲ್ಲಿಯೇ ಸನ್ಯಾಸದೀಕ್ಷೆ ಪಡೆದು, ಸನಾತನ ಧರ್ಮವನ್ನು ಅಧ್ಯಯನ ಮಾಡಿದರು. ವೇದ ಉಪನಿಷತ್‌ಗಳನ್ನು ಅಧ್ಯಯನ ಮಾಡಿದರು. ತಪಸ್ಸಿನಿಂದ ಸರ್ವಜ್ಞರಾದರು. ದೇಶಸಂಚಾರಮಾಡಿ ಹಿಂದೂ ಧರ್ಮದ ಪ್ರತಿಪಾದನೆ ಮಾಡಿದರು. ನರ್ಮದಾ ನದಿತೀರದಲ್ಲಿ ಗೋವಿಂದ ಭಗವತ್ ಪಾದರ ಬಳಿ ಸ್ವಲ್ಪಕಾಲವಿದ್ದು, ಕಾಶಿಗೆ ಹೋಗಿ ಅನೇಕ ಪಂಡಿತರನ್ನು ವಾದದಲ್ಲಿ ಗೆದ್ದು ಶಿಷ್ಯರನ್ನಾಗಿ ಪಡೆಯುತ್ತಾರೆ. ನಂತರ ಬದರಿಗೆ ಹೋಗಿ ವ್ಯಾಸಗುಹೆಯಲ್ಲಿ ನೆಲೆಸಿ ಅನೇಕ ಗ್ರಂಥಗಳನ್ನು ರಚಿಸುತ್ತಾರೆ.

ಶಂಕರಾಚಾರ್ಯರ ಧರ್ಮದಿಗ್ವಿಜಯ ಯಾತ್ರೆ ಬದರಿಯಿಂದ ಕನ್ಯಾಕುಮಾರಿ ವರೆಗೆ ನಡೆಯಿತು. ಅನೇಕ ಪಂಡಿತರೊಡನೆ ವಾದಮಾಡಿ ದಿಗ್ವಿಜಯ ಸಾಧಿಸಿದರು. ಸಾವಿರಾರು ಮಂದಿ ಇವರ ಶಿಷ್ಯರಾದರು. ಧರ್ಮಗ್ಲಾನಿಯನ್ನು ತೊಡೆದು ಹಾಕಿ ಹಿಂದೂ ಧರ್ಮಕ್ಕೆ ಭದ್ರ ಬುನಾದಿಹಾಕಿದರು. ಆದ್ದರಿಂದಲೇ ಇವರಿಗೆ 'ಧರ್ಮ ಸಂಸ್ಥಾಪನಾದೀಶ್ವರ' ಎಂಬ ಕೀರ್ತಿ ಬಂದಿತು.

ಆ ಕಾಲದಲ್ಲಿ ದೇಶದಲ್ಲಿಯೇ ದೊಡ್ಡ ವಿದ್ವಾಂಸರಾಗಿದ್ದ ಮಂಡನ ಮಿಶ್ರ ಮತ್ತು ಅವರ ಮಡದಿ ಶಂಕರಾಚಾರ್ಯರಿಗೆ ಶರಣಾದರು. ಮಂಡನ ಮಿಶ್ರರು ಶಂಕರಾಚಾರ್ಯರಿಗೆ ಶಿಷ್ಯರಾಗಿ ಸುರೇಶ್ವರಾಚಾರ್ಯರೆಂದು ಕೀರ್ತಿವಂತ ರಾದರು.

ಶಂಕರಾಚಾರ್ಯರು ಧರ್ಮಪೀಠ ಸ್ಥಾಪನೆಗೆ ನಿರ್ಧರಿಸಿ ಸರಿಯಾದ ಸ್ಥಳವನ್ನು ಹುಡುಕಿ ಹೊರಟರು. ಶೃಂಗೇರಿ ತಲುಪಿದರು. ಸಹ್ಯಾದ್ರಿಯ ನಿಸರ್ಗ ಸೌಂದರ್ಯ, ಮಲೆನಾಡಿನ ಹಸಿರು ಅವರಿಗೆ ಪ್ರಿಯವಾಯಿತು. ಒಂದು ದಿನ ಮಧ್ಯಾಹ್ನ ಸುಡು ಬಿಸಿಲು ಕಪ್ಪೆಯೊಂದು ಪ್ರಸವಮಾಡುತ್ತಿದೆ. ನಾಗರಹಾವೊಂದು ಹೆಡೆಬಿಚ್ಚಿ ಕಪ್ಪೆಗೆ ನೆರಳು ನೀಡುತ್ತಿದೆ. ಈ ದೃಶ್ಯಕಂಡ ಶಂಕರಾಚಾರ್ಯರು ಬೆರಗಾದರು. ಶತ್ರುಗಳೂ, ಶತ್ರುತ್ವ ಮರೆತು ಸ್ನೇಹದಿಂದ ಬಾಳುವ ಋಷಿಗಳು ನೆಲೆಸಿದ್ದ ಪವಿತ್ರ ಸ್ಥಳವೆಂದು ಅವರಿಗೆ ತಿಳಿಯಿತು. ಈ ಸ್ಥಳವನ್ನು ಆಯ್ಕೆ ಮಾಡಿಕೊಂಡರು. ಕಪ್ಪೆ - ಹಾವು ಕಂಡ ಸ್ಥಳದಲ್ಲಿ ಕಪ್ಪೆ - ಶಂಕರಲಿಂಗ ಸ್ಥಾಪಿಸಿದರು. ಶೃಂಗೇರಿಯಲ್ಲಿ ತಮ್ಮ ಧರ್ಮಪೀಠವನ್ನು

ಸ್ಥಾಪಿಸಿದರು. ದಕ್ಷಿಣಾಮ್ನಾಯ ಧರ್ಮ ಪೀಠವೆಂದು ಕರೆದರು. ಶೃಂಗೇರಿಯಲ್ಲಿ ತಮ್ಮ ಜೀವನದ ಬಹಳ ಕಾಲವನ್ನು ಕಳೆದರು.

ಶಂಕರಾಚಾರ್ಯರು ನಾಲ್ಕು ವೇದಗಳಿಗೆ ನಾಲ್ಕು ಧರ್ಮಪೀಠಗಳನ್ನು ಸ್ಥಾಪಿಸಿದರು. ಆಮ್ನಾಯ' ಎಂದರೆ ವೇದ. ಶೃಂಗೇರಿಯಲ್ಲಿ ಋಜುರ್ವೇದಕ್ಕೆ ಆದ್ಯತೆ. ಶೃಂಗೇರಿಯ ಪೀಠದ ಆರಾಧ್ಯದೇವತೆ 'ಶಾರದೆ' ಆದ್ದರಿಂದ ದಕ್ಷಿಣಾಮ್ನಾಯ ಪೀಠವಾದ ಶೃಂಗೇರಿ ಪೀಠಕ್ಕೆ ಶಾರದಾಪೀಠವೆಂಬ ಹೆಸರೂ ಇದೆ.

ಶಂಕರಾಚಾರ್ಯರು ಪುರೀ, ದ್ವಾರಕಾ, ಬದರಿಗಳಲ್ಲೂ ಧರ್ಮ ಪೀಠಗಳನ್ನು ಸ್ಥಾಪಿಸಿದರು. ಕಾಶ್ಮೀರದಲ್ಲಿ 'ಸರ್ವಜ್ಞ' ಪೀಠವನ್ನು ಅಲಂಕರಿಸಿದರು. ಕೇದಾರದಲ್ಲಿ ಸ್ವಲ್ಪಕಾಲವಿದ್ದು ಗುಹಾ ಪ್ರವೇಶ ಮಾಡಿದರು.

ಶಂಕರಾಚಾರ್ಯರು ಶೃಂಗೇರಿಯ ತುಂಗಾತೀರದಲ್ಲಿ ಕಲ್ಲು ಬಂಡೆಯ ಮೇಲೆ 'ಶ್ರೀಚಕ್ರ' ಸ್ಥಾಪನೆ ಮಾಡಿದರು. ಅದರ ಮೇಲೆ 'ಶಾರದಾದೇವಿ' ಪ್ರತಿಷ್ಠಾಪನೆ ಮಾಡಿದರು. ಧರ್ಮಪೀಠದ ರಕ್ಷಣೆಗಾಗಿ ಪೂರ್ವದಲ್ಲಿ ಕಾಲಭೈರವ, ದಕ್ಷಿಣದಲ್ಲಿ ದುರ್ಗ, ಪಶ್ಚಿಮದಲ್ಲಿ ಆಂಜನೇಯ, ಉತ್ತರದಲ್ಲಿ ಮಹಾಕಾಳಿಯನ್ನು ಸ್ಥಾಪಿಸಿದರು. ಆದ್ದರಿಂದಲೇ ಶೃಂಗೇರಿ ಧರ್ಮಪೀಠಕ್ಕೆ ಯಾವ ಚ್ಯುತಿಯೂ ಇಲ್ಲದೆ ದಿನದಿಂದ ದಿನಕ್ಕೆ ಹೆಚ್ಚು ಪ್ರಬಲವಾಗಿ ಬೆಳೆದು ಹಿಂದೂ ಧರ್ಮದ ಪ್ರವರ್ಧಮಾನಕ್ಕೆ ದುಡಿಯುತ್ತಿದೆ-

ಯಾಗಕುಂಡದಲ್ಲಿ ಉರಿಯುತ್ತಿರುವ ಅಗ್ನಿಯೇ ವೇದಪುರುಷ. ಈ ಅಗ್ನಿಯು ನಾಲ್ಕು ದಿಕ್ಕುಗಳಲ್ಲಿಯೂ ತನ್ನ ನಾಲಿಗೆ ಚಾಚಿ ಉರಿಯುತ್ತಾನೆ. ಪೂರ್ವದಿಕ್ಕಿನಲ್ಲಿ ಋಗ್ವೇದ, ದಕ್ಷಿಣದಿಕ್ಕಿನಲ್ಲಿ ಯಜುರ್ವೇದ, ಪಶ್ಚಿಮದಿಕ್ಕಿನಲ್ಲಿ ಸಾಮವೇದ, ಉತ್ತರದಿಕ್ಕಿನಲ್ಲಿ ಅಥರ್ವಣ ವೇದಗಳಿಗೆ ಆದ್ಯತೆ. ಶಂಕರಾಚಾರ್ಯರು ಪೂರ್ವದಲ್ಲಿ ಪುರೀಪೀಠಸ್ಥಾಪಿಸಿದರು. ಇಲ್ಲಿ ಋಗ್ವೇದಕ್ಕೆ ಆದ್ಯತೆ. ದಕ್ಷಿಣದಲ್ಲಿ ಶೃಂಗೇರಿ ಪೀಠ ಸ್ಥಾಪಿಸಿದರು. ಇಲ್ಲಿ ಯಜುರ್ವೇದಕ್ಕೆ ಆದ್ಯತೆ. ಪಶ್ಚಿಮದಲ್ಲಿ ದ್ವಾರಕಾಪೀಠ ಸ್ಥಾಪಿಸಿದರು. ಇಲ್ಲಿ ಸಾಮವೇದಕ್ಕೆ ಆದ್ಯತೆಯಾಯಿತು. ಉತ್ತರದಲ್ಲಿ ಬದರೀಪೀಠ ಸ್ಥಾಪಿಸಿದರು. ಇಲ್ಲಿ ಅಥರ್ವಣವೇದಕ್ಕೆ ಆದ್ಯತೆ. ಹೀಗೆ ನಾಲ್ಕು ವೇದಗಳನ್ನು ಪೋಷಿಸಿ, ವೃದ್ಧಿಗೊಳಿಸಲು ನಾಲ್ಕು ಧರ್ಮ ಪೀಠಗಳನ್ನು ಸ್ಥಾಪಿಸಿದರು.

ಶೃಂಗೇರಿ ಮೊದಲು ಹೊಯ್ಸಳರ ಆಳ್ವಿಕೆಗೆ ಸೇರಿತ್ತು. ಮಲ್ಲಿಕಾಫರನು ದಂಡಯಾತ್ರೆ ಬಂದಾಗ, ಹೊಯ್ಸಳರನ್ನು ಸೋಲಿಸಿ ಗುಡಿಗೋಪುರಗಳನ್ನು ಧ್ವಂಸಮಾಡಿದನು. ಆಗ ಶೃಂಗೇರಿ ಪೀಠವನ್ನೂ ಧ್ವಂಸಮಾಡಲು ಉದ್ದೇಶಿಸಿ ಆಗ ಪೂಜೆ ಮಾಡುತ್ತಿದ್ದ ಶ್ರೀಗಂಧದ ಮರದಲ್ಲಿ ಶಾರದಾದೇವಿ ವಿಗ್ರಹವನ್ನು ನಾಶಮಾಡಿದನೆಂಬ ಪ್ರತೀತಿಯಿದೆ.

ಶಾರದಾಪೀಠವನ್ನು ಮತ್ತೆ ಕಟ್ಟಲಾಯಿತು. ವಿದ್ಯಾರಣ್ಯದ ಕಾಲದಲ್ಲಿ ಪಂಚಲೋಹದ ಶಾರದಾಮೂರ್ತಿಯನ್ನು ಪ್ರತಿಷ್ಠಾಪನೆ ಮಾಡಿದರು. ಈ ದೇವಿಯ ವಿಗ್ರಹವನ್ನು ಎಷ್ಟು ನೋಡಿದರೂ ಮತ್ತೆ ನೋಡಬೇಕೆನಿಸುತ್ತದೆ.







ಜಗನ್ಮಾತೆ ಶಾರದಾ ದೇವಿಯದು ಮನೋಹರ ಭವ್ಯರೂಪ. ಈ ದೇವಿಯ ದರ್ಶನ ಮಾತ್ರದಿಂದಲೇ ಅಜ್ಞಾನದ ಅಂಧಕಾರವು ತೊಲಗಿ ಸುಜ್ಞಾನದ ಬೆಳಕು ಮೂಡಿ ಬರುತ್ತದೆ.

ಶೃಂಗೇರಿಯು, ವಿಜಯನಗರದ ಪತನದ ನಂತರ ಇಕ್ಕೇರಿಯ ರಾಜರ ಆಳ್ವಿಕೆಗೆ ಒಳಪಟ್ಟಿತು. ಇಕ್ಕೇರಿವೆಂಕಟಪ್ಪನಾಯಕ ಶೃಂಗೇರಿ ಮಠವನ್ನು ವಿಸ್ತಾರಮಾಡಿ, ಬ್ರಾಹ್ಮಣರ ಅಗ್ರಹಾರ ನಿರ್ಮಿಸಿದನು.

ಇಕ್ಕೇರಿಯ ಅರಸರ ಶತ್ರು 'ಕಳಸ' ಪ್ರದೇಶವನ್ನು ಆಳುತ್ತಿದ್ದ ಭೈರವನಾಯಕ. ಇವನು ಶೃಂಗೇರಿಯ ಮಠದ ಸಂಪತ್ತಿನ ಮೇಲೆ ಕಣ್ಣಿಟ್ಟು ಆಗಿಂದಾಗ್ಗೆ ಧಾಳಿಮಾಡಿ ದೋಚುತ್ತಿದ್ದನು. ಆಗ ಶೃಂಗೇರಿಯ ಗುರುಗಳಾಗಿದ್ದ ಶ್ರೀ ಸಚ್ಚಿದಾನಂದ ಭಾರತಿಯವರು ಧೈರ್ಯದಿಂದ ಪರಿಸ್ಥಿತಿಯನ್ನು ಎದುರಿಸಿ, ಊರಿನ ಜನರಿಗೆ ಮಠದಲ್ಲಿ ಆಶ್ರಯ ನೀಡಿದರು. ನಂತರ, ಇಕ್ಕೇರಿಯ ವೀರ ಭದ್ರನಾಯಕನ ಸೈನ್ಯ ಇವರ ನೆರವಿಗೆ ಬಂದು ರಕ್ಷಣೆ ನೀಡಿತು.

ಮೈಸೂರಿನ ಅರಸರು ಇಕ್ಕೇರಿಯ ನಾಯಕನನ್ನು ಸೋಲಿಸಿ ಶೃಂಗೇರಿಯನ್ನು ತಮ್ಮ ವಶಪಡಿಸಿಕೊಂಡರು. ಶೃಂಗೇರಿಯನ್ನು ಭಯ ಭಕ್ತಿಗಳಿಂದ ಪೋಷಿಸಿದರು. ಮರಾಠರಿಗೂ, ಮೈಸೂರು ಅರಸರಿಗೂ ಆಗಾಗೆ ಕದನಗಳಾಗುತ್ತಿದ್ದವು. ಮರಾಠರ ಸೇನಾನಿ 'ಪರಶುರಾಮಭಾವು' ವೀರಾಗ್ರಣಿ. ಆದರೆ ನಾಸ್ತಿಕ, ಅವನಿಗೆ ದೇವರಲ್ಲಿ ನಂಬಿಕೆಯಿರಲಿಲ್ಲ. ಇವನು ಕರ್ನಾಟಕದ ದೇವಾಲಯಗಳನ್ನೂ, ಧರ್ಮಪೀಠಗಳನ್ನೂ ಭಗ್ನಗೊಳಿಸಿ, ಸಂಪತ್ತನ್ನು ಲೂಟಿ ಮಾಡುತ್ತಿದ್ದನು. ಬ್ರಾಹ್ಮಣರನ್ನು ಕೊಲ್ಲುತ್ತಿದ್ದನು. ಶೃಂಗೇರಿ ಮಠವನ್ನು ಲೂಟಿ ಮಾಡಿದನು. ಅಪಾರ ಐಶ್ವರ್ಯವನ್ನು ಕೊಳ್ಳೆ ಹೊಡೆದನು.

ಈ ಹಿನ್ನೆಲೆಯಲ್ಲಿ ಹೆಸರಾಂತ ಸಾಹಿತಿ ತ.ರಾ.ಸು. 'ಚದುರಂಗದಮನೆ' ಕಾದಂಬರಿ ಬರೆದಿದ್ದಾರೆ. ನಂತರ ಮೈಸೂರು ರಾಜ್ಯವನ್ನು 'ಟಿಪ್ಪೂಸುಲ್ತಾನ್' ಆಳಿದನು. ಅವನ ಆಳ್ವಿಕೆಯಲ್ಲಿ ಶೃಂಗೇರಿಯಲ್ಲಿ ದೇವಾಲಯಗಳ ನಿರ್ಮಾಣಕ್ಕೂ, ಕುಂಭಾಭಿಷೇಕಕ್ಕೂ ಬ್ರಾಹ್ಮಣಕೇರಿ ನಿರ್ಮಾಣಕ್ಕೂ ಅಪಾರ ಧನ ಸಹಾಯ ಮಾಡಿದನು. ಶೃಂಗೇರಿ ಧರ್ಮಪೀಠದ ಬಗ್ಗೆ ಟಿಪ್ಪೂಸುಲ್ತಾನನಿಗೆ ಅಪಾರಭಕ್ತಿ. ಪ್ರತಿಸಲ ಬ್ರಿಟಿಷರ ಮೇಲೆ ಯುದ್ಧಕ್ಕೆ ಹೋಗುವಾಗಲೂ ಶೃಂಗೇರಿ ಧರ್ಮಪೀಠದ ಗುರುಗಳ ಆಶೀರ್ವಾದ ಪಡೆಯುತ್ತಿದ್ದನು.

ಟಿಪ್ಪೂಸುಲ್ತಾನ್ ಶೃಂಗೇರಿ ಗುರುಗಳಿಗೆ ಬರೆದ ಒಂದು ಪತ್ರದಲ್ಲಿ ''ನಾನು ದೇವರ ಕರುಣೆ, ತಮ್ಮ ಆಶೀರ್ವಾದ ಮತ್ತು ನನ್ನ ಬಾಹುಬಲವನ್ನು ನಂಬಿದ್ದೇನೆ !'' ಎಂದು ಬರೆದಿದ್ದಾನಂತೆ, ಟಿಪ್ಪೂಸುಲ್ತಾನನ ನಂತರ, ಮೈಸೂರು ಒಡೆಯರು ಶೃಂಗೇರಿ ಪೀಠದ ಬಗ್ಗೆ ತುಂಬುಗೌರವ, ಭಕ್ತಿಗಳಿಂದ ನಡೆದುಕೊಂಡರು.

ಸ್ವಾತಂತ್ರ್ಯಾನಂತರ, ಸರ್ಕಾರವು ಶೃಂಗೇರಿ ಪೀಠಕ್ಕೆ ಸೇರಿದ್ದ ಅನೇಕ ಜಹಗೀರುಗಳನ್ನು ವಶಪಡಿಸಿಕೊಂಡಿತು.

ಶೃಂಗೇರಿಯಲ್ಲಿ ಯಾತ್ರಿಕರು ಉಳಿದುಕೊಳ್ಳಲು ಅತಿಥಿ ಗೃಹಗಳಿವೆ. ಮಠದಲ್ಲಿ ಊಟದ ವ್ಯವಸ್ಥೆಗಳಿವೆ. ತೇರಿನ ಬೀದಿಯಲ್ಲಿ ಭೋಜನಾಲಯಗಳಿವೆ. ರೈಲಿನಲ್ಲಿ ಪ್ರಯಾಣ ಮಾಡುವವರು ಬೀರೂರು ಅಥವಾ ತರೀಕೆರೆಯಲ್ಲಿಳಿದು ಅಲ್ಲಿಂದ ಬಸ್ಸಿನಲ್ಲಿ ಪ್ರಯಾಣಮಾಡಬಹುದು. ಕಳಸ, ಹೊರನಾಡು, ಕುದುರೆಮುಖ, ಚಿಕ್ಕಮಗಳೂರು, ಬೆಂಗಳೂರು, ಶಿವಮೊಗ್ಗ, ಭದ್ರಾವತಿ ಮೊದಲಾದ ಊರುಗಳಿಂದ ಶೃಂಗೇರಿಗೆ ರಸ್ತೆ ಮಾರ್ಗಗಳಿವೆ. ಬಸ್ಸಿನ ಸೌಕರ್ಯಗಳಿವೆ.

ನವರಾತ್ರಿಯಲ್ಲಿ ವಿದ್ಯಾಶಂಕರ ಉತ್ಸವ, ಮಲಹಾನಿಕರೇಶ್ವರ ಉತ್ಸವ, ಶಾರದಾದೇವಿ ರಥೋತ್ಸವಗಳು ತುಂಬ ವಿಜೃಂಭಣೆಯಿಂದ ನಡೆಯುತ್ತವೆ. ಪ್ರತಿ ಶುಕ್ರವಾರ ರಾತ್ರಿ ವೇಳೆಯಲ್ಲಿ ಶಾರದಾದೇವಿಗೆ ಬೆಳ್ಳಿಪಲ್ಲಕ್ಕಿ ಉತ್ಸವ ನಡೆಯುತ್ತದೆ. ಪ್ರತಿ ದಿನ ರಾತ್ರಿ ಜಗದ್ಗುರುಗಳು ಚಂದ್ರಮೌಳೇಶ್ವರನಿಗೆ ಮಹಾಪೂಜೆ ಮಾಡುತ್ತಾರೆ. ಇಲ್ಲಿ ಪ್ರತಿದಿನ ಭಕ್ತರು ಯಾವುದಾದರೊಂದು ಉತ್ಸವದ ಕೈಂಕರ್ಯ ನಡೆಸುತ್ತಿರುತ್ತಾರೆ.

ಋಗ್ವೇದದ ಹತ್ತನೆಯ ಮಂಡಲದ, 136 ನೆಯ ಸೂಕ್ತದ 2 ನೆಯ ಮಂತ್ರದ ದ್ರಷ್ಟಾರ ಋಷ್ಯಶೃಂಗ. ಈ ಮಹಾಪುರುಷನ ತಪೋಭೂಮಿ ಶೃಂಗೇರಿ.

ನವರಾತ್ರಿಯ ಕಾಲದಲ್ಲಿ ಶೃಂಗೇರಿಗೆ ಭೇಟಿಕೊಡಬೇಕು. ಎಲ್ಲೆಲ್ಲೂ ತಳಿರು ತೋರಣಗಳ ಶೃಂಗಾರ, ಕಣ್ಮನ ತಣಿಸುವ ನಿಸರ್ಗ ಸೌಂದರ್ಯ ನಯನಾತೀತ ಶಾರದಾದೇವಿಯ ಅಲಂಕಾರ ವೇದಘೋಷಗಳು, ಉತ್ಸವಗಳ ಸಾಲು, ಕಲಾ ಪ್ರದರ್ಶನಗಳು, ಪಂಡಿತೋತ್ತಮರ ವಾಕ್ಸರಿ. ದೇವಲೋಕದ ಸಾಕಾರ, ನಮ್ಮನ್ನು ಹೊಸ ಲೋಕಕ್ಕೆ ಕೊಂಡೊಯ್ಯುತ್ತವೆ. ಶೃಂಗೇರಿ ಧಾರ್ಮಿಕ ಕ್ಷೇತ್ರ ಮಾತ್ರವಲ್ಲದೆ, ಆತ್ಮ ವಿಹಾರಧಾಮವೂ ಆಗಿದೆ. ಇಲ್ಲಿಗೆ ಒಮ್ಮೆ ಭೇಟಿಕೊಟ್ಟರೆ ಮತ್ತೆ ಮತ್ತೆ ಬರಬೇಕೆನಿಸುತ್ತದೆ. ★

ಚಿತ್ರಗಳು: ಕೃಪೆ - ಆರ್ಕಿಯಾಲಜಿಕಲ್‌ಸರ್ವೆ ಆಫ್ ಇಂಡಿಯಾ, ಮದ್ರಾಸು ವೃತ್ತ.

# ಸ್ತೋತ್ರ ಸಾಹಿತ್ಯದಲ್ಲಿ ಶ್ರೀಕೃಷ್ಣ

- ಡಿ. ಕೆ. ಸುಬ್ರಹ್ಮಣ್ಯಂ.

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನ ಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಂ ॥
ಪರಿತ್ರಾಣಾಯ ಸಾಧೂನಾಂ,
ವಿನಾಶಾಯ ಚ ದುಷ್ಕೃತಾಂ ।
ಧರ್ಮ ಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ ॥

ಭಗವದ್ಗೀತೆಯ ನಾಲ್ಕನೆಯ ಅಧ್ಯಾಯ ''ಜ್ಞಾನ, ಕರ್ಮಯೋಗದ'' ಈ ಎರಡೂ ಶ್ಲೋಕಗಳಲ್ಲಿ ಪರಬ್ರಹ್ಮವು ತನ್ನ ಲೀಲಾ ವಿನೋದಕ್ಕಾಗಿ ಮಾಯಾಮಯ ವಿಶ್ವವನ್ನು ಸೃಜಿಸುವುದೂ, ಆ ವಿಶ್ವದಲ್ಲಿ ಅವತಾರ ಪುರುಷನ ರೂಪದಲ್ಲಿ ಜನ್ಮತಳೆಯುವುದೂ, ಪ್ರತಿಪಾದಿತ ವಾಗಿದೆ.

ಬ್ರಹ್ಮವಸ್ತುವು ಹೀಗೆ ಅವತಾರ ಪುರುಷರ ರೂಪದಲ್ಲಿ ವ್ಯಕ್ತಪ್ರಪಂಚದಲ್ಲಿ ಜನ್ಮ ತಳೆದ ಪರ್ವದಿನಗಳನ್ನೇ ಆಸ್ತಿಕರು ಜಯಂತಿಯ ರೂಪದಲ್ಲಿ ಆಚರಿಸುತ್ತಾರೆ. ನೃಸಿಂಹ ಜಯಂತಿ, ವಾಮನಜಯಂತಿ, ರಾಮನವಮಿ, ಕೃಷ್ಣಜಯಂತಿ -ಇವೇ ಮುಂತಾಗಿ ಹಲವಾರು ಪರ್ವದಿನಗಳಿವೆ. ಶ್ರಾವಣ ಬಹುಳ ಅಷ್ಟಮಿಯು ಅಂತಹ ಪರ್ವದಿನಗಳಲ್ಲಿ ಒಂದಾಗಿದ್ದು ಪರಬ್ರಹ್ಮವು 'ಶ್ರೀಕೃಷ್ಣ' ರೂಪದಲ್ಲಿ ಧರೆಗವತರಿಸಿದ ದಿನ. ಈ ದಿನದಂದು ಆಸೇತು ಹಿಮಾಚಲಪರ್ಯಂತ ಶ್ರೀಕೃಷ್ಣದೇವಾಲಯಗಳಲ್ಲಿ ವಿಶೇಷ ಪೂಜಾ ಕೈಂಕರ್ಯಗಳೇ ನಡೆಯುತ್ತವೆ.

ಶ್ರವಣಂ ಕೀರ್ತನಂ ವಿಷ್ಣೋಃ
ಸ್ಮರಣಂ ಪಾದಸೇವನಂ ।
ಅರ್ಚನಂ ವಂದನಂ ದಾಸ್ಯಂ
ಸಖ್ಯ ಮಾತ್ಮನಿವೇದನಂ ॥

ಎಂಬ ಭಾಗವತ ಮಹಾಪುರಾಣದ ಶ್ಲೋಕವು ಸಗುಣಬ್ರಹ್ಮೋಪಾಸನೆಯ ನವವಿಧ ಅಭಿವ್ಯಕ್ತಿಗಳನ್ನು ಸೂಚಿಸುತ್ತದೆ. ಭಗವಂತನನ್ನು ಸ್ತುತಿಸುವುದೂ ಭಗವತ್ಸೇವೆಯೇ ಆಗಿದೆ. ಆದ್ದರಿಂದ ಶಂಕರರೂ, ರಾಮಾನುಜರು, ಮಧ್ವಾಚಾರ್ಯರು, ಕುಲಶೇಖರ ಆಳ್ವಾರರು, ಲೀಲಾಶುಕರೇ ಮುಂತಾದ ಅನುಭಾವಿ ಆಚಾರ್ಯರೂ ಮತ್ತು ಕವಿಗಳೂ ಸ್ತೋತ್ರ ರೂಪದಲ್ಲಿ 'ಶ್ರೀಕೃಷ್ಣ' ಸೇವೆಯನ್ನೆಸಗಿದ್ದಾರೆ. ಶ್ರೀಕೃಷ್ಣ ಜನ್ಮಾಷ್ಟಮಿಯ ಈ ಶುಭಸಂದರ್ಭದಲ್ಲಿ ಶಂಕರರ ಗೋವಿಂದಾಷ್ಟಕ, ಕುಲಶೇಖರರ ಮುಕುಂದ ಮಾಲಾಸ್ತೋತ್ರ ಮತ್ತು ಲೀಲಾಶುಕರ ಶ್ರೀಕೃಷ್ಣಕರ್ಣಾಮೃತದ ಪರಿಚಯಾತ್ಮಕವಾದ ಈ ಲೇಖನ ಭಗವತ್ಕೈಂಕರ್ಯ ರೂಪದಲ್ಲಿ ಉಪಕ್ರಮಿಸಲ್ಪಟ್ಟಿದೆ.

**ಶಂಕರರ ಗೋವಿಂದಾಷ್ಟಕ :**

'ಗಾಂ'ವಿಂದತ ಇತಿ ಗೋವಿಂದಃ ಎಂದು ಗೋವಿಂದ ಪದದ ನಿಷ್ಪತ್ತಿ. 'ಗಾ' ಎಂದರೆ ಭೂಮಿ, ಸ್ವರ್ಗ, ಧೇನು ಮತ್ತು ವೇದ ಎಂಬ ನಾಲ್ಕರ್ಥಗಳಿವೆ. 'ವಿಂದತಿ' ಎಂಬ ಪದವು 'ವಿಂದ್' ಧಾತುವಿನಿಂದ ನಿಷ್ಪನ್ನವಾಗಿದ್ದು ಉದ್ಧಾರಮಾಡುವುದು ಎಂಬ ಅರ್ಥ ಕೊಡುತ್ತದೆ. ಮಹಾವಿಷ್ಣುವು ತನ್ನ ದಶಾವತಾರಗಳ ಸಂದರ್ಭದಲ್ಲಿ ದುಷ್ಟಜನರಿಂದ ಭೂಮಿ, ಸ್ವರ್ಗಧೇನು ಮತ್ತು ವೇದಗಳಿಗೆ ಆಪತ್ತು ಒದಗಿದಾಗಲೆಲ್ಲಾ ಅವುಗಳನ್ನುದ್ಧರಿಸಿ ರಕ್ಷಿಸಿದನು. ಇದೇ ಗೋವಿಂದ ಪದ ಅರ್ಥ. ಈ ಗೋವಿಂದನನ್ನು ಕುರಿತು ಅವನ ಮಹಿಮಾವರ್ಣನಾರೂಪದ ಎಂಟು ಶ್ಲೋಕ ಗಳನ್ನು ಶ್ರೀಮದಾಚಾರ್ಯ ಶಂಕರರು ಬರೆದಿದ್ದಾರೆ. ಛಂದೋ ಬದ್ಧ ರಚನೆಗಳಾದ ಈ ಶ್ಲೋಕಗಳು ಪ್ರತಿಯೊಂದೂ ಭಾವಗರ್ಭಿತ ವಾಗಿವೆ. ಸಂಗೀತ ಬಲ್ಲವರು ರಾಗ ತಾಳ ಬದ್ಧ ವಾಗಿ ಹಾಡಲು ಯೋಗ್ಯವಾದ ಈ ಅಷ್ಟಕದ ಎರಡು ಶ್ಲೋಕಗಳ ಸೊಬಗನ್ನು ದೃಷ್ಟಾಂತ ರೂಪದಲ್ಲಿ ಸವಿಯೋಣ.

ಸತ್ಯಂ ಜ್ಞಾನಮನಂತಂ ನಿತ್ಯ
ಮನಾಕಾಶಂ ಪರಮಾಕಾಶಂ
ಗೋಷ್ಠಪ್ರಾಂಗಣ ರಿಂಗಣ ಲೋಲ
ಮನಾಯಾಸಂ ಪರಮಾಯಾಸಂ
ಮಾಯಾ ಕಲ್ಪಿತ ನಾನಾಕಾರ
ಮನಾಕಾರಂ ಭುವನಾಕಾರಂ
ಕ್ಷ್ಮಾಯಾ ನಾಥ ಮನಾಥಂ
ಪ್ರಣಮತ ಗೋವಿಂದಂ
ಪರಮಾನಂದಂ

'ಪರಬ್ರಹ್ಮ'ವೇ ಶ್ರೀಕೃಷ್ಣ ರೂಪದಲ್ಲಿ ಧರೆಗವತರಿಸಿತೆಂಬುದನ್ನು ಈ ಶ್ಲೋಕವು





ಪ್ರತಿಪಾದಿಸುತ್ತದೆ. ''ಸತ್ಯಂ ಜ್ಞಾನ ಮನಂತಂ ಬ್ರಹ್ಮಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್'' ಎಂಬ ಶ್ರುತಿವಾಕ್ಯವು ಮೇಲಿನ ಶ್ಲೋಕಕ್ಕೆ ಪ್ರಮಾಣ. ಬ್ರಹ್ಮವಸ್ತುವು ಸಚ್ಚಿದಾನಂದಾತ್ಮಕವಾಗಿದ್ದು. ದೇಶ, ಕಾಲಾತೀತವಾದದ್ದು. ಆದರೂ ತನ್ನ ಲೀಲಾ ವಿಭೂತಿಗಳನ್ನು ಮಾನವ ಲೋಕದಲ್ಲಿ ಪ್ರಕಟಪಡಿಸಲು ವಿಶ್ವದಲ್ಲಿ ಅವತರಿಸುತ್ತದೆ. ಇದನ್ನೇ ಡಿ. ವಿ. ಜಿ. ಯವರು - ಶ್ರೀವಿಷ್ಣು ವಿಶ್ವಾದಿ ಮೂಲ ಮಾಯಾಲೋಲ ದೇವ ಸರ್ವೇಶ ಪರಬೊಮ್ಮನೆಂದಾವುದಂ ಕಾಣ ದೊಡವುಳ್ಳಿಯಿಂ ನಂಬಿಹುದೊ ಜಗ ಆ ವಿಚಿತ್ರಕೆ ನಮಿಸೋ ಮಂಕುತಿಮ್ಮ'' (ಮಂಕು ತಿಮ್ಮನ ಕಗ್ಗ).

- ಎಂದು ಪ್ರತಿಪಾದಿಸುತ್ತಾರೆ. ಈ ಅವತಾರ ಗಳು ಕೇವಲ ಮಾಯೆ ಮಾತ್ರ ಎಂಬು ದನ್ನರಿತವರು ಬ್ರಹ್ಮಜ್ಞಾನಿಗಳಾಗುತ್ತಾರೆ.

ಬಹೂನಾಂ ಜನ್ಮನಾಮಂತೇ
ಜ್ಞಾನವಾನ್ ಮಾಂ ಪ್ರಪದ್ಯತೇ
ವಾಸುದೇವಃ ಸರ್ವಮಿತಿ
ಸಮಹಾತ್ಮಾಸುದುರ್ಲಭಃ ||

(ಭಗವದ್ಗೀತೆ 7ನೇ ಅಧ್ಯಾಯ)

ಅನೇಕ ಜನ್ಮಗಳಾದಮೇಲೆ ಜ್ಞಾನಿಯು - (ಸರ್ವಂ ಖಲ್ವಿದಂ ಬ್ರಹ್ಮ) ಎಂಬ ಶ್ರುತಿವಾಕ್ಯ ದಂತೆ ಸಮಸ್ತ ಜಗತ್ತೂ ಬ್ರಹ್ಮಮಯ ಎಂದರಿ ಯುತ್ತಾನೆ.ಆದರೆ ಅಂತಹ ಮಹಾತ್ಮರು ವಿರಳ.

ಶ್ರೀಕೃಷ್ಣನು ವ್ರಜಭೂಮಿ (ಗೊಲ್ಲರಹಟ್ಟಿ) ಯಲ್ಲಿ ಗೋವಳನಾಗಿ ಜನ್ಮತಳೆದು ಬಾಲಕೃಷ್ಣನಾಗಿ ತನ್ನ ಲೀಲಾವಿನೋದಗಳಿಂದ ಗೋಪಿಯರನ್ನು ರಂಜಿಸಿ ಅವರನ್ನುದ್ಧ ರಿಸಿದನು. ಅಂತಹ ಪರಮಾನಂದಕಾರಕನಾದ ಗೋವಿಂದನಿಗೆ ನಮಿಸಿರಿ.

ಮೃತ್ಸ್ನಾಮತ್ಸೀಹೀತಿ ಯಶೋದಾ
ತಾಡನ ಶೈಶವ ಸಂತ್ರಾಸಂ
ವ್ಯಾದಿತ ವಕ್ತ್ರಾಲೋಕಿತ ಲೋಕಾ
ಲೋಕ ಚತುರ್ದಶ ಲೋಕಾಲಿಮ್ |
ಲೋಕತ್ರಯ ರಿಪು ಮೂಲಸ್ತಂಭಂ
ಲೋಕಾ ಲೋಕ ಮನಾಲೋಕಂ
ಲೋಕೇಶಂ ಪರಮೇಶಂ ಪ್ರಣಮತ
ಗೋವಿಂದಂ ಪರಮಾನಂದಂ ||

ಬಾಲಕೃಷ್ಣಮಣ್ಣನ್ನು ತಿನ್ನುತ್ತಿರುವುದನ್ನು ಮಾತೆ ಯಶೋದೆ ನೋಡಿದಳು. ಕುಪಿತಳಾದ ಆವಳು 'ಮಣ್ಣನ್ನು ತಿನ್ನುವೆಯಾ?' ಎಂದು ಗದರಿಸಿ ಹೊಡೆಯಲೆಂಬಂತೆ ಕೈ ಎತ್ತಲು ಭಯ ಗೊಂಡವನಂತೆ ನಟಿಸುತ್ತಾ ಶ್ರೀಕೃಷ್ಣನು ಬಾಯ್ದೆರೆಯಲು ಕಂಡದ್ದೇನು! ಅಚ್ಚರಿಗೊಂಡ ಅವಳು ತಾನು ಶಿಕ್ಷಿಸ ಹೊರಟಿರುವುದು ಮೂರೂ ಲೋಕಗಳ ಆಧಾರಸ್ತಂಭವೆನಿಸಿದ ಪರಮಾತ್ಮನನ್ನು ಎಂದು ತಿಳಿದಳು. ಅಂತಹ ಪರಮಾನಂದದಾಯಕನಾದ ಗೋವಿಂದನಿಗೆ ನಮಿಸಿರಿ. ಶ್ರುತಿ ಮಧುರ ಪದಪಂಕ್ತಿ ಗಳಿಂದಲೂ, ಅನುಪ್ರಾಸ ವೈಖರಿಯಿಂದಲೂ ಕೂಡಿದ ಈ ಸ್ತೋತ್ರದ ಪ್ರತಿಶ್ಲೋಕವೂ ವ್ಯಾಖ್ಯಾನ ಯೋಗ್ಯವಾಗಿದ್ದು ಸುಲಭವಾಗಿ ಅದ್ವೈತ ಸಿದ್ಧಾಂತದ ಪರಮ ತತ್ವಗಳನ್ನು ಪ್ರತಿಪಾದಿ ಸುತ್ತವೆ.

### ಕುಲಶೇಖರ ಆಳ್ವಾರರ ಮುಕುಂದಮಾಲಾಸ್ತೋತ್ರ

ಮುಕ್ತೇರ್ಭಕ್ತಿರ್ಗರೀಯಸೀ

'ಭಕ್ತಿಯೇ ಮುಕ್ತಿಗಿಂತ ಮಿಗಿಲು' ಇದು ಭಾಗವತ ಸಂಪ್ರದಾಯದ ಆಚಾರ್ಯರ, ಕವಿಗಳ ಅಭಿಮತ. ಅದ್ವೈತಿಗಳಾದರೋ ಭಕ್ತಿಯು ಮುಕ್ತಿಯ ಪ್ರಥಮ ಸೋಪಾನ ಎನ್ನುತ್ತಾರೆ. ಅದೇನೆ ಇರಲಿ ಭಕ್ತಿಯು ಮುಮುಕ್ಷುಗಳಿಗೆ ಅತ್ಯವಶ್ಯವಾದುದು. ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಸೃಷ್ಟಿಯಾದದ್ದೇ ಸ್ತೋತ್ರ ಸಾಹಿತ್ಯ. ಪರಮ ಭಾಗವತರಾದ ಕುಲಶೇಖರ ಆಳ್ವಾರರು ತಮ್ಮ ಮುಕುಂದಮಾಲಾ ಸ್ತೋತ್ರದ ನಲವತ್ತು ಶ್ಲೋಕಗಳಲ್ಲಿ ಭಾವಪೂರ್ಣವಾಗಿ ಭಕ್ತಿಯ ವೈಶಿಷ್ಟ್ಯವನ್ನು ನಿರೂಪಿಸುತ್ತಾರೆ. ಈ ಸ್ತೋತ್ರದ ಕೆಲವು ಶ್ಲೋಕಗಳನ್ನು ನೋಡೋಣ.

ದಿವಿ ವಾ ಭುವಿ ವಾ ಮಮಾಸ್ತುವಾಸೋ
ನರಕೇ ವಾ ನರಕಾಂತಕ ಪ್ರಕಾಮಮ್ |
ಅವಧೀರಿತ ಶಾರದಾರವಿಂದೌ
ಚರಣೌತೇ ಮರಣೇಪಿ ಚಿಂತಯಾಮಿ||

ಅಯ್ಯಾ ಶ್ರೀಕೃಷ್ಣನೇ ನಾನು ಸ್ವರ್ಗದಲ್ಲಿರಲಿ, ನರಕದಲ್ಲಿರಲಿ ಭೂಲೋಕದಲ್ಲಿರಲಿ , ಎಲ್ಲಿ ನಾನು ವಾಸಿಸಿದರೂ, ಶರನ್ಮೇಘಗಳ ಕಾಂತಿಯಿಂದ ಕಂಗೊಳಿಸುವ ಕನ್ನೈದಿಲೆಯನ್ನು ಹೋಲುವ ನಿನ್ನ ಚರಣ ಕಮಲಗಳನ್ನು, ಎಲೈ ನರಕಾಂತಕನೇ, ನನ್ನ ಮರಣ ಸಮಯದಲ್ಲೂ ಮನತುಂಬಿ ಸ್ಮರಿಸುವೆ.

ಕೃಷ್ಣ ತ್ವದೀಯಪದಪಂಕಜ
ಪಂಜರಾಂತಃ
ಅದ್ಯೈವ ಮೇ ವಿಶತು ಮಾನಸ
ರಾಜ ಹಂಸಃ
ಪ್ರಾಣಪ್ರಯಾಣಸಮಯೇ
ಕಫವಾತ ಪಿತ್ತೈಃ
ಕಂಠಾವರೋಧನವಿಧೌ
ಸ್ಮರಣಂ ಕುತಸ್ತೇ||

ಅಯ್ಯಾ ಶ್ರೀಕೃಷ್ಣನೇ, ನಿನ್ನ ಪಾದಪದ್ಮಗಳಲ್ಲಿ ನನ್ನ ಮನವೆಂಬ ರಾಜಹಂಸವು ಈಗಲೇ ಪ್ರವೇಶಿಸಲಿ. ಏಕೆಂದರೆ ನನ್ನ ಮರಣ ಸಮಯವು ಸಂಪ್ರಾಪ್ತವಾದಾಗ ಕಫ, ವಾತ, ಪಿತ್ತಗಳ ವೈಪರೀತ್ಯದಿಂದ ಕೊರಳು ಕಟ್ಟಿದಂತಾಗಲು ನಿನ್ನನ್ನು ಸ್ಮರಿಸುವ ಶಕ್ತಿ ನನಗಿಲ್ಲದೇ ಹೋಗಬಹುದು.

ನಾಥೇನಃ ಪುರುಷೋತ್ತಮೇ
ತ್ರಿಜಗತಾಮೇಕಾಧಿಪೇ ಚೇತಸಾ
ಸೇವ್ಯೇ ಸ್ವಸ್ಯ ಪದಸ್ಯ
ದಾತರಿ ಸದಾ ನಾರಾಯಣೇತಿಷ್ಠತಿ|
ಯಂ ಕಂಚಿತ್ಪುರುಷಾಧಮಂ
ಕತಿಪಯ ಗ್ರಾಮೇಶಮಲ್ಪಾರ್ಥದಂ
ಸೇವಾಯೈ ಮೃಗಯಾಮಹೇ
ನರಮಹೋ ಮೂಕಾವರಾಕಾವಯಂ||

ಪರಬ್ರಹ್ಮದ ಸರ್ವಗುಣಗಳನ್ನೂ ತನ್ನಲ್ಲಿ ಅಡಗಿಸಿಕೊಂಡ ಅರ್ಥಾತ್ ಪರಬ್ರಹ್ಮವೇ

ಶಾನಾದ ('ತತ್ತ್ವಂ ಅಸಿ' ಎಂಬ ಮಹಾ ವಾಕ್ಯದಲ್ಲಿ ವಿವೃತವಾದಂತೆ) ಆತ್ಮವಸ್ತುವು ಪುರುಷೋಪಾಧಿಯಲ್ಲಿ ಕಾಲ, ಕರ್ಮವಶದಿಂದ ಜನ್ಮ ತಳೆಯುತ್ತದೆ. ಸತ್ವ, ರಜಸ್ಸು, ತಮೋಗುಣಗಳ ಪ್ರಭಾವದಿಂದಾಗಿ ಪುಣ್ಯ ಕಾರ್ಯ, ಪಾಪ ಕಾರ್ಯಗಳನ್ನು ಅನುಕ್ರಮ ವಾಗಿ ಎಸಗುತ್ತದೆ. ಅರ್ಥಾತ್ ಆತ್ಮವನ್ನು ತನ್ನಲ್ಲಿ ಹೊಂದಿದ ಮಾನವ ಕರ್ಮವಶದಿಂದ ಅರಿಷಡ್ವರ್ಗಗಳ ಪ್ರಭಾವಕ್ಕೆ ಗುರಿಯಾಗಿ ಮಾಯಾಮಯ ಜಗತ್ತಿನ ವೈಭವಕ್ಕೆ ಮಾರುಹೋಗಿ ಲೋಭದಿಂದ ಪಾಪಕಾರ್ಯ ಗಳನ್ನೆಸಗುತ್ತಾ ಜನನ ಮರಣಗಳ ನಿರಂತರವಾದ ಸುಳಿಗೆ ಸಿಲುಕುತ್ತಾನೆ. ಅಂತಹವರನ್ನು ಕುರಿತು ಆಳ್ವಾರರು ಈ ಉಪದೇಶವನ್ನಿತ್ತಿದ್ದಾರೆ.

''ಎಲೈ ಮಾನವನೇ ನಮ್ಮೊಡೆಯನೂ, ಮೂರೂ ಜಗದೊಡೆಯನೂ ಆದ ನಾರಾಯಣ ನಿರುವಾಗ ಅವನನ್ನು ಸ್ತುತಿಸಿ ಮೋಕ್ಷ ಸಾಮ್ರಾಜ್ಯ ಪದವಿಯನ್ನೇರುವ ಬಯಕೆಯನ್ನು ಬಿಟ್ಟು ಐಹಿಕ ಭೋಗಲಾಲಸೆಯಿಂದ ಯಾವ ಶ್ರೇಷ್ಠಗುಣವೂ ಇಲ್ಲದ ಯಃಕಶ್ಚಿತ್ (ಯಾವನೋ ಒಬ್ಬ) ಪುರುಷಾಧಮನನ್ನು ಕೆಲವೇ ಗ್ರಾಮಗಳ ಒಡೆಯನನ್ನು ಅಲ್ಪಧನ ಕೊಡುವವನನ್ನು ಸೇವೆ ಗೈಯ್ಯಬೇಕೆಂದು ತಹತಹಿಸುತ್ತಾ ಹುಡುಕುತ್ತಿರುವೆ ಯಲ್ಲಾ ಎಂತಹ ಮೂಢಬುದ್ಧಿಯ ಪಾಪಿಗಳು ನೀವು'' ಎಂದು.

ನವವಿಧ ಭಕ್ತಿಗಳಲ್ಲಿ ಭಗವದ್ದಾಸ್ಯವು ಅಸೀಮವಾದುದು. ಅದರಿಂದಲೇ ದಾಸ ವರೇಣ್ಯ ಪುರಂದರರು ''ದಾಸನ ಮಾಡಿಕೋ ಎನ್ನ ಸ್ವಾಮಿ ಸಾಸಿರನಾಮದ ವೆಂಕಟರಮಣ ದಾಸನ ಮಾಡಿಕೋ ಎನ್ನ'' ಎಂದು ಹಾಡಿದ್ದಾರೆ. ಭಗವಂತನ ದಾಸನಾಗುವುದು ಅಷ್ಟೇನೂ ಸುಲಭವಲ್ಲ ಮುಕ್ತಿಸಾಧನೆಯ ಹಾದಿಯಲ್ಲಿರು ವವರಿಗೆ ಮಾತ್ರ ಈ ಪದವಿಯು ಲಭ್ಯ. ''ಮನುಷ್ಯಾಣಾಂ ಸಹಸ್ರೇಷು ಕಶ್ಚಿತ್ ಯತತಿ ಸಿದ್ಧಯೇ ಯತತಾಮಪಿ ಸಿದ್ಧಾನಾಂ ಕಶ್ಚಿನ್ ಮಾಂ ವೇತ್ತಿ ತತ್ವತಃ'' ಮನುಷ್ಯರಲ್ಲಿ ಸಾವಿರದಲ್ಲಿ ಒಬ್ಬರಿಗೆ ಮಾತ್ರ ಮುಕ್ತಿ ಸಾಧನೆಯತ್ತ ಗಮನ ಉಂಟಾಗುವುದು. ಅಂತಹವರಲ್ಲಿ ಯಾವನೋ ಒಬ್ಬನು ಸಾಧನೆಯ ಗಮ್ಯಸೇರಿ ಮುಕ್ತಾತ್ಮ ನಾಗುತ್ತಾನೆ. (ಭಗವದ್ಗೀತೆ 7ನೇ ಅಧ್ಯಾಯ.)

ಮುಕ್ತಾತ್ಮನಾಗಲಿಚ್ಛಿಸುವವನು ಹೇಗಿರುತ್ತಾನೆ ಎಂಬುದನ್ನು ಆಳ್ವಾರರ ಶ್ಲೋಕದಲ್ಲಿ ನೋಡೋಣ.

ಮಜ್ಜನ್ಮನಃ ಫಲಮಿದಂ ಮಧುಕೈಟಭಾರೇ
ಮತ್ಪ್ರಾರ್ಥನೀಯ ತ್ವದನುಗ್ರಹ ಏಷ ಏವ
ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯ
ಭೃತ್ಯಸ್ಯ ಭೃತ್ಯ ಇತಿ ಮಾಂ ಸ್ಮರ ಲೋಕನಾಥ

-ಅಯ್ಯಾ ಮಹಾನುಭಾವನಾದ ಹರಿಯೇ ಪ್ರಾಕ್ತನ ಕರ್ಮಪರಿಪಾಕವಶನಾಗಿ ಈ ಜಗದಲ್ಲಿ ಜನ್ಮತಳೆದಿದ್ದೇನೆ. ಮಧು, ಕೈಟಭಾಸುರ ಸಂಹಾರಿಯೇ, ನಾನು ನಿನ್ನನ್ನು ಪ್ರಾರ್ಥಿಸುತ್ತಾ ಅನುಗ್ರಹಿಸೆಂದು ಬೇಡುವುದಿಷ್ಟೇ. ''ನಿನ್ನ ಸೇವಕನ, ಸೇವಕನ ಪರಿಚಾರಕನ ದಾಸನ ದಾಸನು (ನಾನು) ಎಂದಾದರೂ ನಾನು ನಿನ್ನ ಸ್ಮರಣೆಯಲ್ಲಿದ್ದರೆ ಸಾಕು. ''ಅದಕ್ಕಿಂತ ಅಧಿಕಾನುಗ್ರಹವನ್ನು ನಾನು ಬೇಡೆನು'' ಭಗವದ್ದಾಸ್ಯದ ಅಸೀಮ ಪದವಿಯೇ ಮುಕ್ತಿ ಎಂಬ ಭಾಗವತ ಪಂಥದ ಧ್ಯೇಯವಾಕ್ಯವನ್ನು ಆಳ್ವಾರರು ಹೀಗೆ ಹೃದಯಂಗಮವಾಗಿ ನಿರೂಪಿಸಿದ್ದಾರೆ ಎಂಬುದನ್ನು ಕಂಡು ಆನಂದಿಸುವುದು ಭಕ್ತರ ಪಾಲಿಗೆ ವರವಾಗಿದೆ.

ಈ ಸ್ತೋತ್ರದ ಪ್ರತಿಶ್ಲೋಕವೂ ಗೂಢಾರ್ಥ ಗರ್ಭಿತವೂ, ಭಕ್ತಿಭಾವೋದ್ಬೋಧಕವೂ ಆಗಿವೆ. ಇದರ ಸಾರವನ್ನು ಅನುಭವಿಸಿಯೇ ಅರಿಯಬೇಕು.

**ಲೀಲಾಶುಕನ ಕೃಷ್ಣಕರ್ಣಾಮೃತ :**

ಸಂಗೀತ ಗೋಷ್ಠಿಯು ಪರಿಸಮಾಪ್ತ ವಾಗುವಮುನ್ನ ಕೃಷ್ಣ ಕಾರ್ಣಾಮೃತದ ಒಂದೆರಡು ಶ್ಲೋಕಗಳಾದರೂ ಹಾಡುಗಾರ ರಿಂದ ಹಾಡಲ್ಪಡುತ್ತವೆ. ಈ ಪದ್ಧತಿಯು ಜಯದೇವನ ಗೀತಗೋವಿಂದದ ಅಷ್ಟಪದಿ ಗಳಿಗೂ ಅನ್ವಯವಾಗುತ್ತದೆ. ಅಷ್ಟಪದಿಗಳಲ್ಲಿ ದೇವಾದಿ ವಿಷಯಕ ರತಿಯು ಭಾವಗರ್ಭಿತ ವಾಗಿ ಅಭಿವ್ಯಕ್ತವಾಗುವುದರಿಂದ ಅವನ ಕಾವ್ಯವು, ಕಾವ್ಯಪ್ರಕಾಶಕಾರನಾದ ಮುಮ್ಮಟನು ಹೇಳುವ, ''ರತಿರ್ದೇವಾದಿ ವಿಷ ಯಾವ್ಯಭಿಚಾರೀ ತಥಾಂಚಿತಃ ಭಾವಃ ಪ್ರೋಕ್ತಃ'' ಎಂಬ ಕಾರಿಕೆಗೆ ಉದಾಹರಣೆಯಾಗಿದೆ. ಇದೇ ಭಾವವು ಕೃಷ್ಣಕರ್ಣಾಮೃತದಲ್ಲೂ ಇದ್ದು ಬಹು ಸಂಖ್ಯೆಯ ಶ್ಲೋಕಗಳಲ್ಲಿ ಅಭಿವ್ಯಕ್ತವಾಗುತ್ತದೆ. ಗೇಯ ಸುಭಗತೆಯಲ್ಲಂತೂ ಕೃಷ್ಣಕರ್ಣಾಮೃತವು







ಗೀತಗೋವಿಂದವನ್ನು ಮೀರುತ್ತದೆ. ಸಭಾಸದರನ್ನು ರಾಗಬದ್ಧ ಚಿತ್ತವೃತ್ತಿಗಳನ್ನಾಗಿ ಮಾಡಿ, ಅವರ ಮನದೆದುರು ಶಬ್ದಶಿಲ್ಪವನ್ನು ಕಡೆದಂತೆ ನಿಲ್ಲಿಸುವ ಗುಣ ಶ್ರೀಕೃಷ್ಣ ಕರ್ಣಾಮೃತಕ್ಕಿದೆ. ಕರ್ಣರಸಾಯನವೆನಿಸುವ ಈ ಕೃತಿಯ ಮಾಧುರ್ಯಲೇಶವನ್ನು ನಿರೂಪಿಸುವ ದೃಷ್ಟಾಂತರೂಪದ ಈ ಕೆಲವು ಪದ್ಯಗಳನ್ನು ನೋಡೋಣ.

ತಾಯಿ ಮಗುವಿನ ನಡುವಣ ವಾತ್ಸಲ್ಯಬಂಧ ಅನುಪಮವೂ, ಲೋಕೋತ್ತರವೂ ಆದುದು; ಮುಗ್ಧನೂ, ಶಿಶುಸಹಜ ಚಾಪಲ್ಯದಿಂದ ಕೂಡಿದವನೂ, ತುಂಟನೂ ಆದ ಮಗುವೆಂದರೆ ತಾಯಿಗೆ ಅಧಿಕ ವಾತ್ಸಲ್ಯ, ಮಾತೆ ಯಶೋದೆ ಸಮಸ್ತ ಜಗದ ಮಾತೃವಾತ್ಸಲ್ಯದ ಪ್ರತಿನಿಧಿಯಾದರೆ, ಶಿಶು ಕೃಷ್ಣ 'ಜಗದಾನಂದ ಕಾರಕ'ವಾದ ಶಿಶುಪ್ರತಿನಿಧಿ, ಇವರೀರ್ವರ ನಡುವಣ ವಾತ್ಸಲ್ಯ ಬಂಧವನ್ನು ವರ್ಣಿಸುವಲ್ಲಿ ಲೀಲಾಶುಕರು ತೋರಿರುವ ಅಸದೃಶ ಕಲ್ಪನಾ ಪ್ರತಿಭೆಯ ದ್ಯೋತಕವೆನಿಸುವ ಈ ಪದ್ಯವನ್ನು ನೋಡಿ.

ಕಾಲಿಂದೀ ಪುಲಿನೋದರೇಷು
ಮುಸಲೀ ಯಾವದ್ಗತಃ ಖೇಲಿತುಂ
ತಾವತ್ಕಾರ್ಪರಿಕಂ ಪಯಃ ಪಿಬ
ಹರೇ ವರ್ಧಿಷ್ಯತೇ ತೇ ಶಿಖಾ
ಇತ್ಥಂ ಬಾಲತಯಾ ಪ್ರತಾರಣ
ಪರಾಃ ಶ್ರುತ್ವಾಯಶೋದಾ ಗಿರ.
ಪಾಯಾನ್ನಸ್ವಶಿಖಾಂ ಸ್ಪೃಶನ್
ಪ್ರಮುದಿತಃ ಕ್ಷೀರೇ ಅರ್ಧಪೀತೇ ಹರಿ

ಬಾಲಕ ಕೃಷ್ಣ ಹಾಲನ್ನು ಕುಡಿಯಲು ಹಟಮಾಡುತ್ತಿದ್ದಾನೆ. ಮಾತೆ ಯಶೋದೆ ಮಗುವಿನ ಮೇಲಣ ಸಹಜ ವಾತ್ಸಲ್ಯದಿಂದ ಹೇಳುತ್ತಿದ್ದಾಳೆ, 'ಮಗು, ಕೃಷ್ಣ, ನಿನ್ನಣ್ಣ ಬಲರಾಮ ಯಮುನಾನದಿಯ ಮರಳ ದಡದ ಮೇಲೆ ಆಡಲು ಹೋಗಿರುವನು. ಅವನು ಹಿಂದಿರುಗುವಷ್ಟರಲ್ಲಿ ಈ ಹಾಲನ್ನೆಲ್ಲಾ ಕುಡಿದುಬಿಡು. ನಿನ್ನ ಶಿಖೆಯು ಬೆಳೆಯುತ್ತದೆ' ಎಂದು, ಮಗುವನ್ನುವಂಚಿಸುವ ಮಾತನಾಡಲು, ಏನೂ ಅರಿಯದ ಮುಗ್ಧನಂತೆ (ಆ ತ್ರಿಜತ್ವತಿಯು) ತಾಯಿಯ ಮಾತನ್ನು ನಂಬಿದ ಮಗು ಕೃಷ್ಣ ಬಟ್ಟಲಿನಲ್ಲಿದ್ದಹಾಲಿನಲ್ಲಿ ಅರ್ಧವನ್ನು ಕುಡಿದು ತನ್ನ ಶಿಖೆ ಎಷ್ಟು ಉದ್ದ ಬೆಳೆದಿದೆಯೋ ನೋಡೋಣವೆಂದು ತನ್ನ ತಲೆಗೂದಲನ್ನು ನೇವರಿಸುತ್ತಾ ಮುಟ್ಟಿ ನೋಡಿಕೊಳ್ಳುತ್ತಿದ್ದ. ಅಂತಹ ಬಾಲಕೃಷ್ಣನು ನಮ್ಮನ್ನು ರಕ್ಷಿಸಲಿ.

ಕಂಚಿ ತ್ಕುಂಚಿತ ಲೋಚನಸ್ಯ
ಪಿಬತಃ ಪರ್ಯಾಯಪೀತಸ್ತನಂ
ಸದ್ಯಃ ಪ್ರಸ್ನುತ ದುಗ್ಧ ಬಿಂದುಮಪರಂ
ಹಸ್ತೇನ ಸಮ್ಮಾರ್ಜತಃ
ಮಾತ್ರೈಕಾಙ್ಗುಲಿ ಲಾಲಿತಸ್ಯ
ಚುಬುಕೇ ಸ್ಮೇರಾನನಸ್ಯಾಧರೇ
ಶೌರೇಃ ಕ್ಷೀರ ಕಣಾನ್ವಿತಾ
ನಿಪತಿತಾ ದಂತದ್ಯುತಿಃ ಪಾತುನಃ ||

ಶಿಶುಕೃಷ್ಣ ತಾಯಿಯ ಸ್ತನ್ಯಪಾನ ಮಾಡುತ್ತಿದ್ದಾನೆ. ಒಂದು ಸ್ತನದ ಹಾಲನ್ನು ಹೀರುತ್ತಾ, ಮತ್ತೊಂದು ಕೈಯನ್ನು ಕ್ಷೀರವು ಸ್ರವಿಸುತ್ತಿದ್ದ ಮತ್ತೊಂದು ಸ್ತನದ ಮೇಲಿಟ್ಟು ಸವರುತ್ತಿದ್ದಾನೆ. ಅವನು ಕಣ್ಣನ್ನು ಕಿರಿದುಗೊಳಿಸಿ ತಾಯಿಯ ಮುಖವನ್ನೇ ನೋಡುತ್ತಿದ್ದಾನೆ. ಆಗ ತಾಯಿ ಯಶೋದೆ ಮಗುವನ್ನು ಮುದ್ದಿಸುತ್ತಾ ಅವನ ಗಲ್ಲವನ್ನು ಸವರುತ್ತಿರಲು ಮಂದಹಾಸ ಬೀರುತ್ತಾ ಆದೀಗ ಮೊಳೆಯುತ್ತಿರುವ ಹಾಲು ಹಲ್ಲುಗಳ ಕಾಂತಿಯಿಂದ ಬೆಳಗುವ ತನ್ನ ಮೊಗವನ್ನುತಾಯಿಯತ್ತತಿರುಗಿಸಿದ್ದಾನೆ. ಅವನ ಕೆಳತುಟಿಯ ಮೇಲೆ ಚಿಕ್ಕ ಚಿಕ್ಕ ಹಾಲಿನ ಹನಿಗಳು ಕಂಗೊಳಿಸುತ್ತಿವೆ. ಅಂತಹ ಹರಿಯು ನಮ್ಮನ್ನು ರಕ್ಷಿಸಲಿ.

ರಾಮೋನಾಮಬಭೂವ ಹುಂ
ತದಬಲಾಸೀತೇತಿ ಹುಂ ತೌಪಿತುಃ
ವಾಚಾ ಪಂಚವಟೀತಟೇ
ವಿಹರತಃ ತಾಮಾಹರದ್ರಾವಣಃ |
ನಿದ್ರಾರ್ಥಂ ಜನನೀ ಕಥಾಮಿತಿ
ಹರೇಃ ಹುಂಕಾರತಃ ಶ್ರುಣ್ವತಃ
ಸೌಮಿತ್ರೇ ಕ್ವಧನುರ್ಧನುರಿತಿ
ವ್ಯಾಗ್ರಾ ಗರಃ ಪಾತುವಃ ||

ಅಮ್ಮಾ ನಿದ್ರೆ ಬರುತ್ತಿದೆ ಕಥೆ ಹೇಳು, ಎಂದು ಮಗು ಕೃಷ್ಣ ತಾಯಿಯನ್ನು ಪೀಡಿಸಿದ್ದಾನೆ. ತಾಯಿಯಶೋದೆ ಮಗುವಿನ ವಿನೋದಕ್ಕಾಗಿ ರಾಮಾಯಣದ ಕಥೆಯನ್ನು ಹೇಳುತ್ತಿದ್ದಾಳೆ.

ಯಶೋದೆ : ರಾಮನೆಂಬ ರಾಜನಿದ್ದ

ಕೃಷ್ಣ: ಹುಂ!

ಯಶೋದೆ : ಅವನಿಗೆ ಸೀತೆ ಎಂಬ ಪತ್ನಿ ಇದ್ದಳು.

ಕೃಷ್ಣ: ಹುಂ!

ಯಶೋದೆ : ರಾಮನು ತಂದೆಯ ಮಾತನ್ನು ನಡೆಸಲೆಂದು ಸೀತೆಯೊಡನೆ ಅರಣ್ಯಕ್ಕೆ ಹೋದ್ನ.

ಕೃಷ್ಣ: ಹುಂ?

ಯಶೋದೆ : ಪಂಚವಟೀ ಪ್ರದೇಶದಲ್ಲಿ ಸೀತಾರಾಮರು ವಿಹರಿಸುತ್ತಿದ್ದಾಗ ರಾವಣನು ಸೀತೆಯನ್ನಪಹರಿಸಿದ.

ಕೃಷ್ಣ: ಲಕ್ಷ್ಮಣ ನನ್ನ ಬಿಲ್ಲು ಎಲ್ಲಿದೆ? ಬೇಗ ಕೈಗೆ ತಾ.

(ಈಗ ಅಚ್ಚರಿಪಡುವ ಸ್ಥಿತಿ ಯಶೋದೆಯದಾಯಿತು)

ಹೀಗೆ ದಶಾವತಾರಗಳನ್ನೆತ್ತಿದ ಪರಮ ಪುರುಷನಾದ ಹರಿಯು ನಮ್ಮನ್ನು ರಕ್ಷಿಸಲಿ.

ಶ್ರೀಕೃಷ್ಣನು ನಯನ ಮನೋಹರವಾದ ರೂಪ ಗೋಪವೇಷಧಾರಿಯಾದಾಗಲಂತೂ ಅವನು ಅನುಪಮ ಸುಂದರ. ಅವನ ಈ ರೂಪವನ್ನು ತಮ್ಮ ಸುತೆಚಿನ್ಮಯೀ ಪ್ರತಿಭಾನಯನಗಳಿಂದ ಲೀಲಾಶುಕರು ವರ್ಣಿಸುವ ಬಗೆ ನೋಡಿ.

ಪಿಂಛೇ ಮೂಲೇ ವಿರಚಿತ
ಘನಶ್ಯಾಮ ಪಿಚ್ಛಾವ ಚೂಡೋ
ವಿದ್ಯುಲ್ಲೇಖಾ ವಲಯಿತ ಇವ
ಸ್ನಿಗ್ಧಪೀತಾಂಬರೇಣ।
ಮಾಮಾಲಿಂಗನ್ ಮರಕತ
ಮಣಿಸ್ತಂಭ ಗಂಭೀರ ಬಾಹುಃ
ಸ್ವಪ್ನೇದೃಷ್ಟೋ ತರುಣ ತುಲಸೀ
ಭೂಷಣೋ ನೀಲಮೇಘಃ॥

ಶ್ರೀಕೃಷ್ಣನ ಕುರುಳು ನಯನ ಮನೋಹರ ಆ ಕುರುಳನ್ನು ಬಿಡೆದಂತೆ ವೇಣಿಯ ಕುರುಳಿನಲ್ಲಿ ನೀಲಮೇಘಗಳಂತೆ ಕಪ್ಪಾದ ನವಿಲುಗರಿಯನ್ನು ಸಿಕ್ಕಿಸಿಕೊಂಡಿದ್ದಾನೆ. ಅವನ ಬಿಗಿಯ ತುದಿಯು ಕೇಸರವರ್ಣದ ದುಕೂಲದಿಂದಾಚ್ಛಾದಿತ ವಾಗಿದೆ. ಮೇಘಪಂಕ್ತಿಗಳ ನಡುವಣ ಮಿಂಚಿನಂತೆ ಆ ದುಕೂಲಪಟವು ಹೊಳೆಯುತ್ತಿದೆ. ಮರಕತ (ಕೃಷ್ಣಸ್ಫಟಿಕ) ಮಣಿಶಿಲೆಯ ಸ್ತಂಭಗಳಂತೆ ದೃಢವಾದ ನೀಲ ನೀಳಬಾಹುಗಳಿಂದ ಅವನು ಲಕ್ಷ್ಮಿಯನ್ನಾಲಿಂಗಿಸಿಕೊಂಡಿದ್ದಾನೆ. (ನನ್ನನ್ನು ಅಪ್ಪಿಕೊಂಡಿದ್ದಾನೆ.) ತುಲಸೀ ಮಾಲಾಧಾರಿಯಾಗಿ ಅವನು ಈ ವೇಷದಲ್ಲಿ ಸ್ವಪ್ನದಲ್ಲಿ ನನಗೆ ದರ್ಶನವಿತ್ತನು.

ಇಂತಹ ಹಲವಾರು ಶಬ್ದಶಿಲ್ಪಗಳನ್ನು ಲೀಲಾಶುಕರು ಕಡೆದು ಸಹೃದಯನ ಮನೋಮಂದಿರದಲ್ಲಿ ನಿಲ್ಲಿಸುತ್ತಾರೆ. ಭಾಗವತ ಪುರಾಣದಿಂದಾರಂಭಿಸಿ, ಸ್ತೋತ್ರ, ಸಾಹಿತ್ಯದಲ್ಲಿದ್ದು ಮೇಲಿನ ಕೃತಿಗಳ ಪರಿಚಯ ದಿಗ್ದರ್ಶನ ಮಾತ್ರ. ಊರನ್ನು ಸೇರಬಯಸುವವನಿಗೆ ಕೈಮರದ ಸಹಾಯವಂತೆ. ★

ಭವಜಲಧಿ ಮಗಾಧಂ
ದುಸ್ತರಂ ನಿಸ್ತರೇಯಂ
ಕಥಮಹಮಿತಿ ಚೇತಃ
ಮಾಸ್ಮಗಾಃ ಕಾತರತ್ವಂ
ಸರಸಿಜದೃಶೀ ದೇವೇ
ತಾವಕೀ ಭಕ್ತಿರೇಕಾ
ನರಕಭಿದಿ ನಿಷಣ್ಣಾ
ತಾರಯಿಷ್ಯತ್ಯವಶ್ಯಮ್

××××××××××××××

ಜಿಹ್ವೇ ಕೀರ್ತಯ ಕೇಶವಂ
ಮುರರಿಪುಂ ಚೇತೋ ಭಜ
ಶ್ರೀಧರಂ ಪಾಣಿದ್ವಂದ್ವಂ ಸಮರ್ಚಯ
ಅಚ್ಯುತ ಕಥಾಃ ಶ್ರೋತ್ರದ್ವಯ ತ್ವಂಶ್ರುಣು
ಕೃಷ್ಣಂ ಲೋಕಯ ಲೋಚನದ್ವಯ
ಹರೇರ್ಗಚ್ಛಾಂಘ್ರಿಯುಗ್ಮಾಲಯಂ
ಜಿಘ್ರ ಘ್ರಾಣ ಮುಕುಂದ ಪಾದ ತುಲಸೀಂ
ಮೂರ್ಧನ್ನಮ ಅಧೋಕ್ಷಜಂ

★★★★★



## ಅರ್ಜಿತ ಸೇವೆಗಳು

# ಶ್ರೀ ವೆಂಕಟೇಶ್ವರಸ್ವಾಮಿ ಆಲಯ – ತಿರುಮಲ

| ಕ್ರ.ಸಂ | ಸೇವೆ/ಉತ್ಸವ | ಪ್ರವೇಶ | ದಿನ | ಶುಲ್ಕ |
|---|---|---|---|---|
| **I. ದೈನಿಕ ಸೇವೆಗಳು :** | | | | |
| 1. | ಸುಪ್ರಭಾತ | 1 | ಪ್ರತಿದಿನ | ರೂ. 120-00 |
| 2. | ತೋಮಾಲಸೇವೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 3. | ಅರ್ಚನೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 4. | ಏಕಾಂತಸೇವೆ | 1 | ಪ್ರತಿದಿನ | ರೂ. 120-00 |
| 5. | ಕಲ್ಯಾಣೋತ್ಸವ | 5 | ಪ್ರತಿದಿನ | ರೂ. 2500-00 |
| 6. | ವಿಶೇಷ ಕಲ್ಯಾಣೋತ್ಸವ | 2 | ಪ್ರತಿದಿನ | ರೂ. 750-00 |
| 7. | ಅರ್ಜಿತ ಬ್ರಹ್ಮೋತ್ಸವ | 5 | ಪ್ರತಿದಿನ | ರೂ. 1000-00 |
| 8. | ಡೋಲೋತ್ಸವ | 5 | ಪ್ರತಿದಿನ | ರೂ. 1000-00 |
| 9. | ಅರ್ಚನಾನಂತರ ದರ್ಶನ | 1 | ಶುಕ್ರವಾರ ಹೊರತು | ರೂ. 100-00 |
| 10. | ಸಹಸ್ರ ದೀಪಾಲಂಕಾರಸೇವೆ | 5 | ಪ್ರತಿದಿನ | ರೂ. 1000-00 |
| 11. | ವಸಂತೋತ್ಸವ | 10 | ಪ್ರತಿದಿನ | ರೂ. 3000-00 |
| **II. ವಾರ ಸೇವೆಗಳು :** | | | | |
| 1. | ವಿಶೇಷ ಪೂಜೆ | 5 | ಸೋಮವಾರ | ರೂ. 3000-00 |
| 2. | ಅಷ್ಟದಳ ಪಾದಪದ್ಮಾರಾಧನೆ | 2 | ಮಂಗಳವಾರ | ರೂ. 2500-00 |
| 3. | ಸಹಸ್ರ ಕಲಶಾಭಿಷೇಕ | 6 | ಬುಧವಾರ | ರೂ. 5000-00 |
| 4. | ತಿರುಪ್ಪಾವಡಾ | 6 | ಗುರುವಾರ | ರೂ. 5000-00 |
| 5. | ಪೂರಾಭಿಷೇಕ | 1 | ಶುಕ್ರವಾರ | ರೂ. 750-00 |
| 6. | ಪುನುಗುಬಟ್ಟಲು | 1 | ಶುಕ್ರವಾರ | ರೂ. 300-00 |
| 7. | ಕಸ್ತೂರಿ ಬಟ್ಟಲು | 1 | ಶುಕ್ರವಾರ | ರೂ. 150-00 |
| 8. | ನಿಜಪಾದ ದರ್ಶನ | 1 | ಶುಕ್ರವಾರ | ರೂ. 100-00 |
| 9. | ವಸ್ತ್ರಾಲಂಕಾರ ಸೇವೆ | 2 | ಶುಕ್ರವಾರ | ರೂ. 12250-00 |
| **III. ವಾರ್ಷಿಕ ಉತ್ಸವಗಳು :** | | | | |
| 1. | ವಸಂತೋತ್ಸವ | 10 | ಏಪ್ರಿಲ್ | ರೂ. 3000-00 |
| 2. | ಪದ್ಮಾವತೀ ಪರಿಣಯ | 5 | ಮೇ | ರೂ. 5000-00 |
| 3. | ಅಭಿಧ್ಯೇಕ ಅಭಿಷೇಕ | 5 | ಜೂನ್ | ರೂ. 2000-00 |
| 4. | ಪುಷ್ಪ ಪಲ್ಲಕ್ಕಿ | 5 | ಜುಲೈ | ರೂ. 1000-00 |
| 5. | ಪವಿತ್ರೋತ್ಸವ | 2 | ಅಗಸ್ಟ್ | ರೂ. 5000 00 |
| 6. | ಪುಷ್ಪಯಾಗ | 5 | ನವಂಬರ್ | ರೂ. 3500-00 |
| 7. | ಕೋಯಿಲ್ ಆಳ್ವಾರ್ ತಿರುಮಂಜನ | 10 | ವರ್ಷಕ್ಕೆ 4ಬಾರಿ | ರೂ. 3000-00 |
| 8. | ಪ್ಲವೋತ್ಸವ | 5 | ವರ್ಷಕ್ಕೆ 5 ದಿನ | ರೂ. 2500-00 |

ಅರ್ಜಿತ ಸೇವೆ ಮಾಡಬಯಸುವ ಯಾತ್ರಿಕರು ತಕ್ಕ ಹಣದ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು 90 ದಿನ ಮೊದಲು ಪೇಷ್ಕಾರ್ ಶ್ರೀ ತಿರುಮಲೆ ಆಲಯ - ತಿರುಮಲೆ - ಇವರಿಗೆ ಕಳುಹಿಸಬೇಕು. ಹೆಚ್ಚಿನ ವಿವರಗಳಿಗಾಗಿ ವಿಚಾರಿಸಿ - ದೂರವಾಣಿ - 08574 - 79277.

**(WWW. Tirumala.com ವೆಬ್‌ಸೈಟ್‌ನ ಮೂಲಕವೂ ಅರ್ಜಿತ ಸೇವೆಗಳನ್ನು ರಿಸರ್ವ್ ಮಾಡಿಸಬಹುದು.)**

# ಸನತ್ಸುಜಾತೀಯ ನೀತಿ

- ವಿದ್ವಾನ್ ರಘುಸುತ.

ಬ್ರಹ್ಮನ ಮಾನಸಪುತ್ರರಲ್ಲಿ ಸನತ್ಸು ಜಾತೀಯನೂ ಒಬ್ಬನು. ಮಹಾಭಾರತದ ಪ್ರಕಾರ ಇವರು ಏಳು ಸಹೋದರರು.

ಸನಃ ಸನತ್ಸುಜಾತಶ್ಚ
ಸನಕಃ ಸ ಸನಂದನಃ ।
ಸನತ್ ಕುಮಾರಃ ಕಪಿಲಃ
ಸಪ್ತಮಶ್ಚ ಸನಾತನಃ ॥

(ಮಹಾ. ಶಾಂತಿಪರ್ವ - 340/72)

ಅಂದರೆ ಇವರ ಹೆಸರುಗಳು ಸನ, ಸನತ್ಸುಜಾತ, ಸನಕ, ಸನಂದನ, ಸನತ್ಕುಮಾರ, ಕಪಿಲ ಹಾಗೂ ಸನಾತನ ಎಂದು.

ಒಂದು ಕಡೆ ಇವರು ನಾಲ್ವರು ಎಂದು ತಿಳಿಸಲಾಗಿದೆ-

ತಪ್ತಂ ತಪೊ ವಿವಿಧಲೋಕಸಿ ಸೃಕ್ಷಯಾ ಮೆ
ಆದೌ ಸನಾತ್ ಸ್ವತಪಸಃ ಸ ಚತುಃಸನೋ
ಅಭೂತ್ ।
ಪ್ರಾಕ್ಕಲ್ಪಸಂಪ್ಲವ ವಿನಷ್ಟಮಿಹಾತ್ಮ ತತ್ತ್ವಂ
ಸಮ್ಯಗ್ ಜಗಾದ್ ಮುನಯೋ
ಯದಚಕ್ಷತಾತ್ಮನ್ ॥

(2/7/5)

ಇಲ್ಲಿ ಇವರುಗಳ ಹೆಸರು ಸನಕ, ಸನಂದನ, ಸನಾತನ ಹಾಗೂ ಸನತ್ಕುಮಾರ - ಎಂದಿದೆ. ಇವರುಗಳು ಜನ್ಮತಃ ಬಾಲಕರು ಹಾಗೂ ಬ್ರಹ್ಮಚಾರಿಗಳು.

ಆದುದರಿಂದ ಇವರು ಏಳು ಅಥವಾ ನಾಲ್ಕು ಬ್ರಹ್ಮಚಾರಿಗಳು ಎಂದು ಕರೆಯುವರು.

ಸನ ಎಂದರೆ ಸದಾ ಎಂದರ್ಥ. ಅಂದರೆ ಸದಾಕಾಲದಲ್ಲೂ ಇವರು ಬಾಲಕರಾಗಿಯೇ ಇರುವವರು.

ಶ್ರೀಮದ್ಭಾಗವತದ ಪ್ರಕಾರ ಸನ ಎಂದರೆ ತಪಸ್ಸು ಎಂದರ್ಥ. ಇವರೆಲ್ಲ ತಪಸ್ವಿಗಳು, ತತ್ತ್ವದರ್ಶಿಗಳು, ಬ್ರಹ್ಮನಿಷ್ಠರು ಹಾಗೂ ಜೀವನ್ಮುಕ್ತರಾಗಿದ್ದಾರೆ. ಇವರಲ್ಲಿ ಸನತ್ಕುಮಾರ ನನ್ನು ಸನತ್ಸುಜಾತ ಎಂದೂ ಕರೆಯಲಾಗುವುದು. ಸನತ್‌ಸುಜಾತ ಎನ್ನುವುದರ ಅರ್ಥ ಸನತ್ ಕುಮಾರ ಎಂದೇ ಆಗಿದೆ. ಸನತ್ ಎಂದರೆ ಸದಾ ಮತ್ತು ಸುಜಾತ ಎಂದರೆ ಸುಷ್ಠು ಪ್ರಕಾರದಿಂದ ಉತ್ಪನ್ನನಾದವನು ಎಂದರ್ಥ. ಈತನು ಉತ್ತಮ ರೀತಿಯ ಬ್ರಹ್ಮವೇತ್ತನು.

ದೇವರ್ಷಿ ನಾರದರು ಈತನಿಗೆ ಬ್ರಹ್ಮವಿದ್ಯೆಯ ಉಪದೇಶವನ್ನು ನೀಡಿದ್ದರು. ಸನತ್ ಸುಜಾತ ಎನ್ನುವ ಹೆಸರಿನ ಉಪಪರ್ವದಲ್ಲಿ ಸನತ್ ಸುಜಾತನಿಗೆ ಸಂಬಂಧವಿರುವ ಒಂದು ಉಪಾಖ್ಯಾನವಿದೆ. ಇದನ್ನು 'ಸನತ್ ಸುಜಾತೀಯಂ', 'ಸನತ್ ಸುಜಾತೀಯ ದರ್ಶನಮ್' ಅಥವಾ 'ಸನತ್ ಸುಜಾತೀಯ ನೀತಿ' ಎಂದು ಕರೆಯಲಾಗುತ್ತದೆ. ಸನತ್ ಸುಜಾತೀಯನ ಮುಖಾಂತರ ನೀಡಿದ ಉಪದೇಶವನ್ನೆಂಬುದನ್ನು ಆಲಿಸಿದ ಧೃತ ರಾಷ್ಟ್ರನಿಗೆ ಮಹತ್ತರವಾದ ಶಾಂತಿ ಲಭಿಸಿತು. ಅವನಲ್ಲಿನ ಪ್ರಾಪಂಚಿಕ ಮೋಹ ಭಂಗವಾಯಿತು. ವಿರಾಟನಗರದಲ್ಲಿದ್ದ ಯುಧಿಷ್ಠಿರನಿಗೆ ಸಂಜಯನ ಮುಖಾಂತರ ಒಂದು ಸಂದೇಶವನ್ನು ಕಳುಹಿಸಿದ್ದನು. ಆದರೆ ಈ ಸಂದೇಶವು ಅಸಫಲಗೊಂಡು ಸಂಜಯನು ಹಿಂತಿರುಗಿದ್ದ. ಅವನು ಹೇಳಿದುದನ್ನು ಕೇಳಿ ಖಿನ್ನನಾದ, ಆಗ ವಿದುರನು ಅವನನ್ನು ಸಮಾಧಾನಗೊಳಿಸಿ, ಅವನಲ್ಲಿನ ಮಾಯಾಮೋಹವನ್ನು ದೂರ ಮಾಡಿದ.

'ವಿದುರ! ನೀನು ಹೇಳಿದುದರಿಂದ ಮನಸ್ಸಿಗೆ ಶಾಂತಿಯೇನೋ ದೊರೆಯುತ್ತದೆ. ಆದರೆ ನನ್ನ ಪ್ರೀತಿಯ ಪುತ್ರ ದುರ್ಯೋಧನನು ಬಂದು ನನ್ನ ಎದುರು ನಿಂತಾಗ, ಇದೆಲ್ಲವನ್ನೂ ಮರೆತುಹೋಗುವೆನಲ್ಲ. 'ನಾನು ಶಾಶ್ವತ ಶಾಂತಿ ಹೊಂದುವಂತಹ ಉಪದೇಶ ನೀಡು' - ಎಂದು ಧೃತರಾಷ್ಟ್ರನು ಹೇಳಿದ.

'ನಾನು ಧಾರ್ಮಿಕ ವಿಷಯ ಅಥವಾ ಬ್ರಹ್ಮವಿದ್ಯೆಯ ಬಗ್ಗೆ ಉಪದೇಶ ನೀಡಲು ಅಸಮರ್ಥನಾಗಿದ್ದೇನೆ. ಕಾರಣ ನಾನು ಜನ್ಮತಃ ಶೂದ್ರನು. ಆದರೆ ನಿಮಗಾಗಿ ಈ ಕೆಲಸವನ್ನು ಮಾಡಬಲ್ಲಂತಹ ಓರ್ವ ಯೋಗ್ಯ ಮಹಾ ಪುರುಷನನ್ನು ನಿಮಗೆ ನೀಡಬಲ್ಲೆ. ಆತನು ತಪಸ್ವಿಯು, ಧರ್ಮಜ್ಞನೂ, ಬ್ರಹ್ಮವೇತ್ತನೂ ಆಗಿರುವನು' ಎಂದು ವಿದುರ ಹೇಳಿದ.

ಆ ಕೂಡಲೇ ಅವನು ಮನಸ್ಸಿನಲ್ಲಿ ಸನತ್ ಸುಜಾತನನ್ನು ಆಹ್ವಾನಿಸುವ ರೀತಿಯಲ್ಲಿ ಪ್ರಾರ್ಥಿಸಿ, ಧ್ಯಾನ ಮಾಡಿದ.

ಈ ಪ್ರಾರ್ಥನೆಯು ಸನತ್‌ಸುಜಾತನನ್ನು ತಲುಪಿ, ಆ ಕೂಡಲೇ ಆತ ಅವರಿಬ್ಬರ ಎದುರುಗಡೆ ನಿಂತ.

ಆ ಮಹರ್ಷಿಯು ಧೃತರಾಷ್ಟ್ರನ ಮಾಯಾಮೋಹವನ್ನು ಭಗ್ನಗೊಳಿಸುವಂತಹ ಉಪದೇಶಗಳನ್ನು ನೀಡಿದ.

ಈ ಉಪದೇಶಗಳ ಸಾರಭೂತ ಗ್ರಂಥವೇ 'ಸನತ್ ಸುಜಾತೀಯ ದರ್ಶನ' ಅಥವಾ 'ಸನತ್ ಸುಜಾತೀಯ ನೀತಿ' ಎಂಬುದು.

ಈ ಕೃತಿಯು ನಾಲ್ಕು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. 1) ಮೊದಲನೇ ಅಧ್ಯಾಯ ದಲ್ಲಿ ಮೃತ್ಯುವನ್ನು ಜಯಿಸುವ ಬಗ್ಗೆ ವಿವರಗಳಿವೆ.

2) ಎರಡನೇ ಅಧ್ಯಾಯದಲ್ಲಿ ಮೌನವಹಿಸುವುದರ ಪ್ರಾಮುಖ್ಯತೆಯನ್ನು ವಿವರಿಸಲಾಗಿದೆ. ಮೌನವಾಗಿರುವುದು ಎಷ್ಟು ಉತ್ತಮ ಎಂಬುದನ್ನು ತಿಳಿಸಿ, ಮೌನೇನ ಕಲಹಂ ನಾಸ್ತಿ ಎಂಬ ಗಾದೆಯ ಪ್ರಾಮುಖ್ಯತೆಯನ್ನೂ ತಿಳಿಸಿದನು.



'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಅಂದರೆ ಮಾತು ಮೌನವಾದಲ್ಲಿ ಆದೇ ಬ್ರಹ್ಮ ಎಂಬುದು ಇದರ ಭಾವಾರ್ಥ ಹಾಗೂ ಅಂತರಾರ್ಥ.

3) ಮೂರನೇ ಅಧ್ಯಾಯದಲ್ಲಿ ಬ್ರಹ್ಮಚರ್ಯವನ್ನು ಪಾಲಿಸಬೇಕಾದ ರೀತಿ ನೀತಿಗಳು ಹಾಗೂ ನಿಯಮಗಳನ್ನು ವಿವರಿಸಲಾಗಿದ್ದು ಇದರಿಂದ ಮಾನವನಿಗೆ ಆಗುವ ಉಪಯೋಗಗಳನ್ನು ತಿಳಿಸಲಾಗಿದೆ.

4) ನಾಲ್ಕನೇ ಅಧ್ಯಾಯದಲ್ಲಿ ಬ್ರಹ್ಮನ ವಿರಾಟ್ ಸ್ವರೂಪದ ವರ್ಣನೆ ಇದೆ.

ವಿದುರನ ಸ್ಮರಣೆಯಿಂದ ಸನತ್ಸುಜಾತನು ಉಪಸ್ಥಿತನಾದ ಕೂಡಲೇ ಧೃತರಾಷ್ಟ್ರನು ಕೇಳಿದ ಮೊದಲನೆ ಪ್ರಶ್ನೆಯು 'ಮೃತ್ಯುವಿಗೆ ಸಂಬಂಧಿಸಿದ್ದಾಗಿತ್ತು.'

'ಮೃತ್ಯು ಎಂದರೆ ಏನು?'

ಮೃತ್ಯುವೆಂದರೆ ದೇವ, ದಾನವ, ಅಸುರ, ಮಾನವ, ಪಶುಪಕ್ಷಿಗಳೆಲ್ಲವೂ ನಡುಗುತ್ತವೆ. ಸ್ಥಾವರವೂ ಕೂಡ ಹೆದರುತ್ತದೆ.

ಆದರೆ ಆತ್ಮಜ್ಞಾನಿ ಅಥವಾ ಆತ್ಮಜ್ಞನು ಮಾತ್ರ ಮೃತ್ಯುವಿಗೆ ಹೆದರುವುದಿಲ್ಲ.

ಮೃತ್ಯುಭಯವು ಎರಡು ರೀತಿಯದ್ದಾಗಿರುತ್ತದೆ.

1. ತನ್ನ ಹಾಗೂ ತನ್ನನ್ನು ನಂಬಿದವರ ಮೃತ್ಯುವಿನ ಭಯ.

2. ಕೆಲವರು ತಮ್ಮ ಮೃತ್ಯುವಿನ ಬಗ್ಗೆ ಹೆದರದೆ, ತಮ್ಮಿಂದ ಇತರರಿಗೆ ಮೃತ್ಯುವಾಗದಿರಲಿ ಎನ್ನುವ ಭಯ.

ಇವೆರಡರಲ್ಲಿ ಮೊದಲನೆಯದು ಸಾಮಾನ್ಯ ಜನರಲ್ಲಿ ಇರುತ್ತದೆ. ಎರಡನೆಯದು ಉತ್ತಮರಲ್ಲಿ ಉಂಟಾಗುತ್ತದೆ.

ಇವುಗಳಲ್ಲಿ ಮೊದಲನೆಯದಕ್ಕೆ ಧೃತರಾಷ್ಟ್ರನಂತಹವರು ಎರಡನೆಯದಕ್ಕೆ ಅರ್ಜುನನಂತಹವರು ಉದಾಹರಣೆ.

ಧೃತರಾಷ್ಟ್ರನಿಗೆ ತನ್ನ ಹಾಗೂ ತನ್ನ ಪರಿಜನರ, ತನ್ನ ಮಕ್ಕಳ ಸಾವಿನ ಭಯ ಇರುತ್ತದೆ. ಇವರಿಗೆ ಇತರರ ಸಾವಿನ ಭಯ ಇರುವುದಿಲ್ಲ.

ಆದರೆ ಅರ್ಜುನನು ತನ್ನ ಸಾವಿನ ಬಗ್ಗೆ ಚಿಂತಿಸುವುದಿಲ್ಲ. ತನ ಗುರು, ಪಿತಾಮಹರು ಇತ್ಯಾದಿಯವರುಗಳ ಸಾವಿನ ಬಗ್ಗೆ ಚಿಂತಿಸುತ್ತಾನೆ.

ಇವೆರಡು ಪಾತ್ರಗಳೂ ಮಹಾಭಾರತದ್ದಾದರೂ ವ್ಯತ್ಯಾಸ ಬಹಳ. ಒಂದಕ್ಕೊಂದು ವಿರುದ್ಧ.

ಧೃತರಾಷ್ಟ್ರನಿಗೆ ಉಪದೇಶ ನೀಡಿದವನು ಬ್ರಹ್ಮವೇತ್ತನೂ, ಜೀವನ್ಮುಕ್ತನೂ ಆದ ಸನತ್ಸುಜಾತೀಯನು. ಆದರೆ ಅರ್ಜುನನಿಗೆ ಉಪದೇಶ ಮಾಡಿದವನು ಪರಬ್ರಹ್ಮನೂ, ಆನಂದಕಂದನೂ ಆದ ಶ್ರೀಕೃಷ್ಣನು.

ಇವರಿಬ್ಬರ ಉಪದೇಶಗಳಿಂದ ಕೂಡಿದ ಎರಡು ಮಹಾನ್ ಗ್ರಂಥಗಳೇ - ಸನತ್ಸುಜಾತೀಯ ಹಾಗೂ ಶ್ರೀಮದ್ ಭಗವದ್ಗೀತೆ.

ಮೃತ್ಯು ಭಯದಿಂದ ಕೂಡಿದ ಧೃತರಾಷ್ಟ್ರನು ಕೇಳಿದ ಪ್ರಶ್ನೆಗೆ ಸನತ್ಸುಜಾತೀಯನು ಈ ರೀತಿಯಲ್ಲಿ ಉತ್ತರಿಸಿದನು -

'ನಿತ್ಯ ನೈಮಿತ್ತಿಕ ಕರ್ಮದಿಂದ ಬ್ರಹ್ಮಚರ್ಯವನ್ನು ಪಾಲಿಸುವುದರಿಂದ ಮೃತ್ಯುವನ್ನು ದೂರಮಾಡಬಹುದು. ಮೃತ್ಯು ಎನ್ನುವುದು ಇಲ್ಲವೇ ಇಲ್ಲ ಎಂದು ಇನ್ನು ಕೆಲವರು ಹೇಳುವರು. ನಿಮ್ಮ ಅನುಮಾನ ಸರಿಯಾದುದು. ಈ ಎರಡೂ ವಾದಗಳಲ್ಲಿ ಯಥಾರ್ಥವಾದುದನ್ನು ನಾನು ವಿವರಿಸುತ್ತಿದ್ದೇನೆ. ಮೋಹ ಅಥವಾ ಅಜ್ಞಾನವನ್ನು ಮೃತ್ಯುವೆಂದು ಕೆಲವರು ಹೇಳುತ್ತಾರೆ. ಆತ್ಮವಿಲ್ಲದ ವಸ್ತುಗಳ ಬಗ್ಗೆ, ವ್ಯಕ್ತಿಗಳ ಬಗ್ಗೆ ಮೋಹವನ್ನು ತೋರಿಸುವುದು ಅಜ್ಞಾನ. ಇದೇ ಮೃತ್ಯು. ಆತ್ಮಜ್ಞಾನದ ಮುಖಾಂತರ ಅಜ್ಞಾನವನ್ನು ದೂರ ಮಾಡಿಕೊಂಡವರಿಗೆ ಮೃತ್ಯುಭಯವಿರುವುದಿಲ್ಲ. ಹಗ್ಗದ ಪರಿಚಯ ಇರುವವರಿಗೆ ಸರ್ಪದ ಭಯ ಇಲ್ಲದಿರುವಂತೆ ಜ್ಞಾನಿಗೆ ಮೋಹವೆನ್ನುವುದು ಇರುವುದೇ ಇಲ್ಲ. ಆದರೆ ಪ್ರಮಾದ ಅಥವಾ ಅಪಘಾತವನ್ನೆ ಮೃತ್ಯುವೆಂದು ಕರೆಯುತ್ತೇನೆ. ಅಪಘಾತ ಗಳನ್ನು ಧೈರ್ಯದಿಂದ ಎದುರಿಸುವವನು ಅಮರತ್ವವನ್ನು ಪಡೆಯುವವನು. ಆತ್ಮಸ್ಥಿತಿಯನ್ನು ಅರಿತವನು ಅಪಘಾತದಿಂದ ದೂರವಾಗುತ್ತಾನೆ. ಇದು ಎಲ್ಲ ಅನರ್ಥಗಳಿಗೂ ಮೂಲಕಾರಣ. ವೇದದಲ್ಲಿ ಕಥೆಯೊಂದು ಬರುತ್ತದೆ.'

ಒಮ್ಮೆ ರಾಕ್ಷಸರ ರಾಜನಾದ ವಿರೋಚನನು ಹಾಗೂ ದೇವತೆಗಳ ನಾಯಕನಾದ ಇಂದ್ರನು ಬ್ರಹ್ಮನ ಬಳಿಗೆ ಹೋದರು. ವಿರೋಚನನು ಪ್ರಮಾದಗಳ ಬಗ್ಗೆ ಮಾತನಾಡಲು ಆತ್ಮಾಭಿಮಾನ (ಒಣ ಹೆಮ್ಮೆ) ಅಡ್ಡ ಬಂದಿತು. ಆದರೆ ಇಂದ್ರನು ಅದರ ಅಂತರಾರ್ಥದ ವಿವರಗಳ ಉಪದೇಶವನ್ನು ಪಡೆದ. ಇದರಿಂದ ವಿರೋಚನನು ಪತನದ ಹಾದಿ ಹಿಡಿದ, ಇಂದ್ರನು ಉನ್ನತಿಯ ಹಾದಿ. ಆದುದರಿಂದ ಅಜ್ಞಾನಕ್ಕಿಂತ ಬೇರೆಯಾದ ಯಾವ ರೂಪವೂ ಇಲ್ಲ.

ಮೃತ್ಯುವಿನ ಅಧಿಷ್ಠಾತನು ಯಮ ಧರ್ಮರಾಜನು. ಅಜ್ಞಾನಕ್ಕೆ ವಶನಾದವನು ಕೋಪಗೊಳ್ಳುವುದು ಹೆಚ್ಚು. ಈ ಕೋಪದಿಂದ ಅವನ ಮನಸ್ಸು ವಿಚಲಿತವಾಗುವುದು, ಕೇಂದ್ರೀಕೃತವಾಗುವುದಿಲ್ಲ. ಕ್ರೋಧದಿಂದ ಮೋಹವು ಉಂಟಾಗುತ್ತದೆ. ಅಪಾಯವನ್ನು ಉಂಟುಮಾಡುವ ಅಜ್ಞಾನವನ್ನು ದೂರ ಮಾಡಿದಲ್ಲಿ, ಅಪಾಯವಿಲ್ಲದ ಆತ್ಮಸ್ವರೂಪವು ಪ್ರಾಪ್ತವಾಗುತ್ತದೆ. ಈ ಮೂಲಕ ಮುಕ್ತಿಯು ಲಭಿಸುತ್ತದೆ. ದೇಹಾಭಿಮಾನವನ್ನು ಹೊಂದಿರುವವನು ಪರಮಾತ್ಮನನ್ನು ಪಡೆಯಲಾರನು. ಹೀಗಾಗುವುದಕ್ಕೆ ಕಾರಣ ಅವನು ನಾನಾ ವರ್ಗಗಳಲ್ಲಿ ಅಲೆದಾಡುವವನಾಗಿರುವನು. ಕರ್ಮಮಾಡುವುದರಿಂದ ಅದರ ಫಲವು ತನ್ನ ಪರವಾಗಿರಬೇಕೆಂದು ಅವನು ನಿರೀಕ್ಷಿಸಬಾರದು. ಕರ್ಮಫಲದಲ್ಲಿ ಅನಾಸಕ್ತಿ ಹೊಂದಿದಾಗಲೇ ಅದರ ಪ್ರವೃತ್ತಿ ನಿಂತುಹೋಗುವುದು. ಇದರ ಪರಿಣಾಮವಾಗಿ ಇಂದ್ರಿಯಗಳು ಭೋಗದ ಬಗ್ಗೆ ವಿರಕ್ತಿಗೊಳ್ಳುತ್ತವೆ. ಈ ರೀತಿಯಲ್ಲಿ ಅನಾಸಕ್ತಿ ಮೋಹವು ನಿವೃತ್ತಿಗೊಂಡಮೇಲೆ, ಆತ್ಮಜ್ಞಾನದ ನಿಷ್ಪತ್ತಿಯು ಉಂಟಾಗುತ್ತದೆ.

ರಾಜನ್, ಸಣ್ಣ ವಿಷಯಗಳ ಬಗೆಗೆ ಯೋಚಿಸುವುದು ವಿನಾಶಕ್ಕೆ ಕಾರಣವಾಗುತ್ತದೆ. ಇದರಿಂದ ಕಾಮ, ಕ್ರೋಧ, ಲೋಭ, ಮೋಹಗಳು ಉತ್ಪನ್ನವಾಗಿ ಮಾನವನ ನಾಶಕ್ಕೆ ಕಾರಣವಾಗುತ್ತದೆ. ಈ ಅಜ್ಞಾನವೇ ಮೃತ್ಯು. ಇದು ವಿಷಯಾಸಕ್ತ ಶೂನ್ಯವಾಗಿರಬೇಕು. ಇದೇ ಮೃತ್ಯುವನ್ನು ದೂರ ಮಾಡಬಲ್ಲದು.

ಮತ್ತೆ ಧೃತರಾಷ್ಟ್ರನು, ಅರಿಷಡ್ವರ್ಗಗಳ ಬಗ್ಗೆ ನಿರ್ಲಕ್ಷ್ಯ ತೋರುವುದೇ ಆತ್ಮಸ್ವರೂಪಕ್ಕೆ ದಾರಿಯಾದರೆ, ಸನಾತನ ವಿಧಾನಗಳಾದ ಯಜ್ಞಾದಿ ಕರ್ಮಗಳನ್ನು ಶ್ರುತಿಗಳಲ್ಲಿ ತೋರಿಸಿರುವುದಾದರೂ ಏಕೆ ? - ಎಂದನು.

ಪ್ರಾಪಂಚಿಕ (ಲೌಕಿಕ) ಜನಕ್ಕಾಗಿ ಇವನ್ನು ತಿಳಿಸಲಾಗಿದೆಯೇ ಹೊರತು ಬೇರೇನೂ ಅಲ್ಲ. ಅಪಾಯವಿಲ್ಲದ ನಿಷ್ಕಾಮ ಕರ್ಮಗಳನ್ನು ಅನುಸರಿಸುವಂತೆ ತಿಳಿಸಲಾಗಿದೆ. ಇದೇ ಅನಾಸಕ್ತಿಯೋಗ. ಅವರಿಗೆ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುವುದಷ್ಟೆ ಬೇಕಾಗಿರುವುದು. ಇದೇ ಅವರಿಗೆ ಸರ್ವಸ್ವವಾಗಬೇಕು - ಎಂಬುದು ಋಷಿಯ ಉತ್ತರ.

ಆಲಿಸಿ ತೃಪ್ತನಾದ ಧೃತರಾಷ್ಟ್ರನು ಸಂಪೂರ್ಣ ಚರಾಚರಗಳು ವಿಶ್ವ ಪರಮಾತ್ಮ ಸ್ವರೂಪದ್ದಾಗಿದ್ದರೆ, ಇದು ಪ್ರಕಟಗೊಳ್ಳುವುದಕ್ಕೆ ಪ್ರೇರೇಪಣೆ ನೀಡಿದವರು ಯಾರು? ಎಂದು ಪ್ರಶ್ನಿಸಿದನು.

ಮಹರ್ಷಿಯು ಮುಂದುವರೆದು, ಇದಕ್ಕೆ ಅನಾದಿ ಮಾಯೆಯೇ ಕಾರಣ. ಇದು ನೀರಿನಲ್ಲಿ ಕಾಣುವ ಸೂರ್ಯನ ಪ್ರತಿಬಿಂಬದಷ್ಟೆ ಮಿಥ್ಯವಾದುದು. ಮಾಯೆ (ವಿದ್ಯೆ ಇಲ್ಲದಿರುವಿಕೆ - ಜ್ಞಾನವಿಲ್ಲದಿರುವಿಕೆ)ಯು ಪರಮಾತ್ಮನಲ್ಲಿ ಭೇದ ಭಾವವನ್ನು ಕಾಣುತ್ತದೆ. ನಿಜ ಹೇಳಬೇಕೆಂದರೆ ಪ್ರತಿಯೊಬ್ಬ ಜೀವಿಯೂ ಪರಮಾತ್ಮ ಸ್ವರೂಪಿಯೇನೆ! ಆದುದರಿಂದ ಜಗತ್ತು ಅಪಘಾತಗಳಿಂದ ಕೂಡಿದೆ. ಅಪಘಾತಗಳಿಲ್ಲದುದೇ ಮುಕ್ತಿ.

ಪ್ರತಿಯಾಗಿ ಧೃತರಾಷ್ಟ್ರನು, ಹಾಗಿದ್ದಲ್ಲಿ ವ್ಯಕ್ತಿಯು ಧರ್ಮ, ಅಧರ್ಮ ಕಾರ್ಯಗಳನ್ನು ಎಸಗುವುದಾದರೂ ಏಕೆ? ಎಂದು ಪ್ರಶ್ನಿಸಿದನು.

ರಾಜನ್! ಅಧರ್ಮ - ಧರ್ಮಗಳು, ಪಾಪ-ಪುಣ್ಯಗಳು, - ಇವೆರಡೂ ಅಜ್ಞಾನದಿಂದ ಉಂಟಾಗುವಂತಹವು. ಅದ್ವಿತೀಯನಾದ ಬ್ರಹ್ಮನಿಗೆ ಪಾಪ - ಪುಣ್ಯಗಳು ಎಂಬುದರ ಸೋಂಕೂ ಇಲ್ಲ. ಪ್ರತಿಯೊಬ್ಬನೂ ತನ್ನ ದೇಹದ ಮೇಲೆ ಅಭಿಮಾನವನ್ನು ಹೊಂದಿರುವನು. ಇದೇ ಅವನ ಹಣೆಬರಹ (ವಿಧಿ). ಯಾರಿಗೆ ಲೌಕಿಕ ವಿಷಯಗಳ ಬಗ್ಗೆ ಆಸಕ್ತಿ ಇಲ್ಲವೊ ಅದೇ ಅವನಿಗೆ ಸ್ವರ್ಗ. ಅವನು ಅನಿತ್ಯನಾಗುವನು. ಇದಕ್ಕೆ ಯಾವುದೇ ರೀತಿಯ ಕರ್ಮದ ಅಗತ್ಯವೂ ಇಲ್ಲ.

ಶಾಸ್ತ್ರವಿಹಿತವಾದ ಶುದ್ಧ ಕರ್ಮಗಳನ್ನು ಚಿತ್ತ ಶುದ್ಧಿಗಾಗಿ ಮಾಡಲಾಗುತ್ತದೆ. ಇದು ಚಿತ್ತಜ್ಞಾನದ ಸಾಧನೆಗೆ ಸಹಾಯಕವಾಗುತ್ತದೆ. ಇಂತಹ ಕರ್ಮವನ್ನು ಮಾಡುವ ಅಪ್ರಮಾದಿ ಜ್ಞಾನಿಯು ಜೀವನ್ಮುಕ್ತನಾಗುವನು. ಹೀಗೆ ಜೀವನ್ಮುಕ್ತಿ ಪಡೆದವರು ಜಡರಾಗಿ ಅದರ ಆಚರಣೆಯಲ್ಲಿ ತೊಡಗುವರು. ಇದೇ ರೀತಿಯಲ್ಲಿ ಲೌಕಿಕ ಶಾಸ್ತ್ರೋಕ್ತ ಕಾರ್ಯಗಳನ್ನೂ ಮಾಡುವರು. ಇಂತಹವರನ್ನು ಕೆಲವು ಅಲ್ಪರು ಅಪಹಾಸ್ಯ ಮಾಡಿದರೂ, ಇವರು ಕ್ಷೋಭೆಗೆ ಒಳಗಾಗುವುದಿಲ್ಲ. ಇಂತಹವರು ಮಾನಾಪ ಮಾನಗಳನ್ನು ಸಮನಾಗಿ ಕಾಣುವರು.

ಮಹರ್ಷಿ! ಮೌನಾಚರಣೆಯನ್ನು ಮಾಡುವುದು ಹೇಗೆ? - ಎಂದು ಧೃತರಾಷ್ಟ್ರನು ಪ್ರಶ್ನಿಸಿದನು.

ಬ್ರಹ್ಮನಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದೇ ಮೌನ. ಮಾನವನು ಶ್ರವಣ, ಮನನ, ನಿದಿಧ್ಯಾಸನಗಳ ಮುಖಾಂತರ ಬಹಳಷ್ಟು ಸಲ ಆತ್ಮಚಿಂತನೆ ಮಾಡಿದಾಗಲೆ ನಿತ್ಯಕಲ್ಪ ಸಮಾಧಿಯನ್ನು ಪಡೆಯುವನು. -ಎಂದು ಸನತ್ಸುಜಾತನು ಹೇಳಿದ.

ಮಹರ್ಷೇ! ಋಗ್ವೇದ, ಯಜುರ್ವೇದ ಹಾಗೂ ಸಾಮವೇದ ಇವುಗಳಲ್ಲಿ ತಿಳಿಸಿರುವಂತೆ ಕರ್ಮಗಳ ಆಚರಣೆ ಮಾಡಿದಾಗ ಪಾಪಾಚರಣೆ ಮಾಡಿದಂತೆ ಹೇಗೆ ಆಗುತ್ತದೆ? - ಎಂದು ಧೃತರಾಷ್ಟ್ರನು ಪ್ರಶ್ನಿಸಿದ.

ಮಹಾರಾಜಾ! ಶರೀರಾಧ್ಯಾಸಪೂರ್ವಕ ಯಾವುದೇ ಕರ್ಮವನ್ನು ಮಾಡಲಿ, ಇವುಗಳನ್ನು ಆಚರಿಸುವುದರಿಂದ ಆತ್ಮಜ್ಞಾನದ ಸಾಧನ ಆಗುವುದಿಲ್ಲ.

ಹಾಗಿದ್ದಲ್ಲಿ ಮೂರು ವೇದಗಳನ್ನೂ ಓದುವುದು ವ್ಯರ್ಥವಲ್ಲವೆ? ಎಂದು ಮತ್ತೆ ಅವನು ಕೇಳಿದ.

ಈ ವೇದಗಳು ತಪಸ್ಸು, ಇತ್ಯಾದಿ ತಿಳಿಸಿರುವ ಕರ್ಮಗಳನ್ನು ಅಧಿಕಾರೀ ಭೇದದಿಂದ ಭಿನ್ನ ಭಿನ್ನವಾದವುಗಳು. ಇವು ಶ್ರುತಿ ಪ್ರತಿಪಾದಿತ ಕರ್ಮಗಳನ್ನು ಗುರಿಯಾಗಿ ಹೊಂದಿವೆ. ಇವು ಮನಸ್ಸಿನ ಮಲಿನವನ್ನು ದೂರಮಾಡಿ ಪ್ರಮಾದವನ್ನು ತಪ್ಪಿಸುತ್ತವೆ. ಬ್ರಹ್ಮ ಸ್ಥಿತಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸುವಂತೆ ಇವು ಮಾಡುತ್ತವೆ. ಬ್ರಹ್ಮವೇತ್ತನು ಇವುಗಳನ್ನು ನಿಷ್ಕಾಮ ಭಾವದಿಂದ ಮಾಡುವನು. ಇದರಿಂದ ಆಗುವ ಉಪಯೋಗ ಬಹಳ ಮುಖ್ಯವಾದುದು. ಇದರಿಂದ ಆತ್ಮಸಾಕ್ಷಾತ್ಕಾರ ಆಗುತ್ತದೆ.

ತತ್ತ್ವಜ್ಞಾನಿ ಅಲ್ಲದವನು ಭೂಲೋಕ, ಸ್ವರ್ಗಗಳಲ್ಲಿನ ಸುಖಗಳನ್ನು ಅನುಭವಿಸಲು ಇವುಗಳನ್ನು ಮಾಡುತ್ತಾನೆ. ಆದುದರಿಂದ ನಿಷ್ಕಾಮ ತಪವು ಮತ್ತು ನಿಷ್ಕಾಮ ಕರ್ಮಗಳು ಬಹಳಷ್ಟು ಉಪಾದೇಯವಾದವುಗಳು.

ಆತ ಮುಂದುವರೆದು ನಿಷ್ಕಾಮ ಕರ್ಮದಲ್ಲಿ ಈ ಕೆಳಕಂಡ ಹನ್ನೆರಡು ದೋಷಗಳು ಬಹಳಷ್ಟು ಅಡ್ಡಿಯನ್ನು ಉಂಟುಮಾಡುತ್ತವೆ. ಅವು ಯಾವುವೆಂದರೆ - ಶೋಕ, ಕ್ರೋಧ, ಲೋಭ, ಕಾಮ, ಮಾನಾಪಮಾನಗಳು, ಸದಾನಿದ್ದೆ ಮಾಡುವುದು, ಈರ್ಷ್ಯೆ, ಮೋಹ, ತೃಷ್ಣೆ, ಹೇಡಿತನ - ಇತ್ಯಾದಿಗಳು ಇವೆ. ಇವುಗಳನ್ನು ಯಾರೂ ಅನುಸರಿಸಬಾರದು.

ಶೋಕಃ ಕ್ರೋಧಶ್ಚ ಲೋಭಶ್ಚ
ಕಾಮೋ ಮಾನಃ ಪರಾಸುತಃ



ಈರ್ಷ್ಯಾಃ ಮೋಹೋ ವಿಧಿಶ್ಚಾ ಚ
ಕೃಪಾಸೂಯಾ ಜುಗುಪ್ಸಾ
ದ್ವಾದಶೈತೇ ಮಹಾದೋಷಾಃ
ಮನುಷ್ಯ ಪ್ರಾಣ ನಾಶನಾಃ
(ಮಹಾ. ಉ.ಪ. 45-102)

ಇವುಗಳಲ್ಲಿ ಪ್ರತಿಯೊಂದೂ ಬಲಯುತವಾದವುಗಳೇಯೆ. ಈ ಹನ್ನೆರಡೂ ಸಾಧನ ಮಾರ್ಗಕ್ಕೆ ಅಡ್ಡಿ ಉಂಟು ಮಾಡುವವುಗಳು. ಇದಕ್ಕೆ ವ್ಯತಿರೇಕವಾಗಿ ಹನ್ನೆರಡು ಗುಣಗಳು ನಿಷ್ಕಾಮಮಾರ್ಗಕ್ಕೆ ಸಹಾಯಕವಾಗುತ್ತವೆ. ಅವು ಯಾವುವೆಂದರೆ - ಧರ್ಮ, ಸತ್ಯ, ತಪ, ಇಂದ್ರಿಯಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವುದು, ದುರಹಂಕಾರ ಪಡೆದೆ ಇರುವುದು, ಲಜ್ಜೆ, ಸಹನಶೀಲತೆ, ಯಾವುದರಲ್ಲಿಯೂ ದೋಷವನ್ನು ಹುಡುಕದೆ ಇರುವಿಕೆ, ದಾನ, ಶಾಸ್ತ್ರಜ್ಞಾನ, ಧೈರ್ಯ ಹಾಗೂ ಕ್ಷಮೆ (ಮ.ಸ.ಪರ್ವ 45/5). ಈ ಹನ್ನೆರಡು ಗುಣಗಳನ್ನೂ ಹೊಂದಿದ್ದು ಯಾರು ಮೌನಿಗಳಾಗಿರುವರೋ ಅಂತಹವರೇ ಅಪ್ರಮಾದಿಗಳಾಗಿದ್ದು ಮರಣದಿಂದ ದೂರವಿರುವರು. ಇವೆಲ್ಲದರಲ್ಲಿ ದಮನವು ಮಹತ್ವ ಪೂರ್ಣವಾದುದು. ಮದದಲ್ಲಿ ಹದಿನೆಂಟು ದೋಷಗಳಿವೆ. ದಮದಲ್ಲಿ ಹದಿನೆಂಟು ಗುಣಗಳು ಇವೆ.

ಮದೋ ಅಷ್ಟಾದಶದೋಷಃ
ಸಸ್ಯಾತ್ ಪುರಾ ಅಪ್ರಿಕೀರ್ತಿತಃ
ಲೋಕ ದ್ವೇಷ್ಯಂ ಪ್ರಾತಿಕೂಲ್ಯ
ಮಭ್ಯಸೂಯಾ ಮೃಷಾವಚಃ
ಕಾಮಕ್ರೋಧೀ ಪಾರತಂತ್ರ್ಯಂ
ಪರಿವಾದೋಽಥ ಪೈಶುನಂ
ಅರ್ಥ ಹಾನಿರ್ವಿವಾದಶ್ಚ
ಮಾತ್ಸರ್ಯ ಪ್ರಾಣಿ ಪೀಡನಂ
(ಮಹಾ. ಉ.ಪ.)

ಮದದಲ್ಲಿ ಹದಿನೆಂಟು ದೋಷಗಳೆಂದರೆ - ಲೋಕ ವಿರೋಧಿ ಕೆಲಸಗಳನ್ನು ಮಾಡುವುದು, ಶಾಸ್ತ್ರವಿರುದ್ಧ ಕೆಲಸಗಳನ್ನು ಮಾಡುವುದು, ಉತ್ತಮರ ಬಗ್ಗೆ ದೋಷಾರೋಪಣೆ ಮಾಡುವುದು, ಅಸತ್ಯ ಹೇಳುವುದು, ಕಾಮ, ಕ್ರೋಧ, ಪರಾಧೀನತೆ, ಇತರರಲ್ಲಿ ತಪ್ಪು ಹುಡುಕುವುದು ಹಣದ ದುರುಪಯೋಗ, ಕಲಹ, ಪ್ರಾಣಿಗಳ ಹಿಂಸೆ, ಈರ್ಷ್ಯೆ - ಇತ್ಯಾದಿಗಳು.

ಅಪ್ರಮಾದಗಳು ಎಂಟು ರೀತಿಗಳದ್ದಾಗಿರುತ್ತದೆ. ಇವುಗಳನ್ನು ತ್ಯಜಿಸುವುದರಿಂದ, ಎಂಟು ರೀತಿಯ ಗುಣಗಳು ಲಭಿಸುತ್ತವೆ - ಸತ್ಯ, ಧ್ಯಾನ, ಸಮಾಧಾನ, ಬೋಧ್ಯ, ವೈರಾಗ್ಯ, ಅಸ್ತೇಯ, ಬ್ರಹ್ಮಚರ್ಯ ಹಾಗೂ ಅಸಂಗ್ರಹ.

'ರಾಜೇಂದ್ರ! ಸಕಲ ಪಾಪಗಳ ಹಾಗೂ ಜನನ ಮರಣಗಳ ಹಾಗೂ ವೃದ್ಧಾಪ್ಯವನ್ನು ದೂರ ಮಾಡುವ ಒಂದೇ ಮಾರ್ಗವೆಂದರೆ ಇಂದ್ರಿಯ ನಿಗ್ರಹ. ಮನಸ್ಸಿನಲ್ಲಿ ಕೆಟ್ಟ ಯೋಚನೆಗಳನ್ನು ದೂರ ಮಾಡುವಿಕೆ, ಆದರ - ಅನಾದರಗಳಿಂದ ದೂರ ಇರುವುದು. ಇವೆಲ್ಲವೂ ಮಾನಸಿಕ ಸೌಖ್ಯದ ಮೂಲವಾಗಿರುತ್ತವೆ. ಏಕವೇದೀ, ದ್ವಿವೇದೀ, ತ್ರಿವೇದೀ, ಚತುರ್ವೇದೀ- ಆಗುವುದರಿಂದ ಹೆಚ್ಚು ಪ್ರಯೋಜನವಿಲ್ಲ. ಮನಸ್ಸನ್ನು ಪರಮಾತ್ಮನಲ್ಲಿ ಸ್ಥಿರಗೊಳಿಸುವುದೇ ಉತ್ತಮ ಮಾರ್ಗ. ಸತ್ಯ ಸ್ವರೂಪ ಪರಮಾತ್ಮನಿಂದ ಯಾರು ದೂರವಿರುವರೊ ಅಂತಹವರಲ್ಲಿನ ಜ್ಞಾನವು ವ್ಯರ್ಥವಾಗುವುದು. ಸದಾ ಮೌನಧಾರಿಯಾಗಿದ್ದು ಬ್ರಹ್ಮದಲ್ಲಿ ಲೀನನಾಗಿರುವವನೇ ಶ್ರೇಷ್ಠನು. ಅರಣ್ಯದಲ್ಲಿ ಇರುವುದರಿಂದಷ್ಟೇ ಯಾರೂ ಮುನಿಯಾಗುವುದಿಲ್ಲ. ಸತ್ಯವನ್ನು ಅರಿತವನೆ ನಿಜವಾದ ಮುನಿಯಾಗುವನು. ಜ್ಞಾನ ಸ್ವರೂಪನಾದ ಪರಮಾತ್ಮನನ್ನು ಯಾರು ನೋಡುವರೊ ಅವನೇ ಮಹಾನ್ ಆಗುವನು. ಅವನಲ್ಲಿ ಇದರಿಂದ ಉಂಟಾಗುವ ಆನಂದವು ಪರಮಾನಂದವಾಗಿರುತ್ತದೆ. ಇಂಥಹನಲ್ಲಿ ವಿಷಯ ಭೋಗಗಳ ಬಗ್ಗೆ ಆಸಕ್ತಿ ಇರುವುದಿಲ್ಲ. ಅವನಿಗೆ ಮೋಹ, ಶೋಕಗಳಿರುವುದಿಲ್ಲ. ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಾಮ್' ಎಂಬಂತೆ ಆಗುತ್ತಾನೆ ಅವನು.

'ಆದುದರಿಂದ ಹೇ ರಾಜನ್ ! ನೀನು ಶೋಕಿಸದಿರು. ತಂದೆ-ಮಕ್ಕಳ ಸಂಬಂಧ ವಾಸ್ತವಿಕವಲ್ಲ. ನೀನೇ ಎಲ್ಲರ ತಾಯಿ - ತಂದೆ. ಆತ್ಮ, ಪಿತಾಮಹ ಹಾಗೂ ಎಲ್ಲರ ಮಕ್ಕಳು ಎಂದೇ ತಿಳಿದು[illegible]! [illegible]ಯ ಮೇಲೆ ಇರುವುದೆಲ್ಲ[illegible] ಎಂ[illegible]. ನೀನು ಭೂತ, ಭವಿಷ್ಯತ್, ವರ್ತಮಾನಗಳೆಂದು ಅರಿತುಕೊ. ನೀನು ಎಲ್ಲದರಲ್ಲೂ, ಎಲ್ಲವೂ ನಿನ್ನಲ್ಲಿಯೇ ಇವೆ. ಆತ್ಮವೇ ನಿನ್ನ ನಿವಾಸಸ್ಥಾನ. ನೀನು ಯಾರಿಗೂ ತೊಂದರೆ ಕೊಡುವುದಿಲ್ಲ. ಅಹಂ, ನಾನು, ನನ್ನದು, ಎನ್ನುವುದನ್ನು ಮರೆತು ಹೋಗು. ಇದರಿಂದ ನೀನು ಸುಖಿ ಆಗುವೆ. ಇದರಿಂದ ನೀನು ಆನಂದ ಸ್ವರೂಪವನ್ನು ಪಡೆಯುವೆ.'

ಈ ಉಪದೇಶಗಳಿಂದ ಧೃತರಾಷ್ಟ್ರನು ತೃಪ್ತಗೊಂಡು ಆನಂದ ತುಂದಿಲನಾದನು.

(ಆಧಾರ)

## ಸ್ವಾಮಿ ದರ್ಶನಕ್ಕೆ
### ಉಚಿತ ಅವಕಾಶ

ತಿರುಪತಿಯ ಬಸ್ ನಿಲ್ದಾಣ, ರೈಲು ನಿಲ್ದಾಣಗಳಿಂದ ಅಲಿಪಿರಿಗೆ ಉಚಿತ ಬಸ್ ಇದೆ. ಅಲಿಪಿರಿಯಲ್ಲಿ ನಿಮ್ಮ ವಸ್ತುಗಳನ್ನು ಬೆಟ್ಟಕ್ಕೆ ಉಚಿತವಾಗಿ ಸಾಗಿಸಲಾಗುವುದು. ಬೆಟ್ಟದಲ್ಲಿ ಉಚಿತ ಸರಳ ಕೋಣೆಗಳು ದೊರೆಯುತ್ತವೆ. ಯಾತ್ರಿಕ ಸಮುದಾಯ ಸೌಲಭ್ಯ ಕೇಂದ್ರಗಳಲ್ಲಿ ಉಚಿತವಾಗಿ ಸಾಮಾನುಗಳನ್ನು ಭದ್ರಪಡಿಸಿಕೊಂಡು ಸಾಮೂಹಿಕವಾಗಿ ವಿಶ್ರಾಂತಿ ಪಡೆಯಬಹುದು. ಇಲ್ಲಿ ಸ್ನಾನ ಶೌಚಗೃಹಗಳು ಉಂಟು. ಮುಡಿಯನ್ನು ಉಚಿತವಾಗಿ ನೀಡಲು ಅವಕಾಶವಿದೆ. ದರ್ಶನಕ್ಕೆ ಹೊರಡುವಾಗ ಪಾದರಕ್ಷೆಗಳನ್ನು ಉಚಿತವಾಗಿ ಭದ್ರಪಡಿಸಬಹುದು. ಧರ್ಮದರ್ಶನದಲ್ಲಿ ಸ್ವಾಮಿಯನ್ನು ಕಂಡುಬರುವಾಗ ಉಚಿತ ಭೋಜನದ ಚೀಟಿಯನ್ನು ಪಡೆದು ಕ್ಯಾಂಟೀನ್‌ನಲ್ಲಿ ಭೋಜನ ಸೌಲಭ್ಯ ಪಡೆಯಬಹುದು.



ಕಾಮದ ಹಸು. ಕಾಮನ ತಂದೆಯೆ.

# ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ

ಚಿತ್ರ ಸಂಪುಟ

30-11-2002 - 08-12-2002








# ಶ್ರೀ ಶಂಕರಾಚಾರ್ಯರ ಮಣಿರತ್ನಮಾಲಾ

**- ಕಂದಾಡೈ ಕೇಶವನ್.**

ಶ್ರೀಮಚ್ಛಂಕರ ಭಗವತ್ ಪಾದಾಚಾರ್ಯ ವಿರಚಿತ ಮಣಿರತ್ನಮಾಲಾ ತತ್ವ ಜ್ಞಾನಾದಿಗಳನ್ನು ಬೋಧಿಸುವ ಉಪದೇಶ ರತ್ನಮಾಲೆ. ಕುಲಶೇಖರರ ಮುಕುಂದ ಮಾಲೆಯಂತೆ ಶಂಕರಾಚಾರ್ಯರ ಭಜಗೋವಿಂದವೆಂಬ ಮೋಹಮುದ್ಗರ ಸ್ತೋತ್ರದಂತೆ, ಮಣಿ ರತ್ನಮಾಲ. ಉಪನಿಷತ್, ವೇದಾಂತ ಗೀತಾ - ಇವುಗಳ ಸಾರ ಸಂಗ್ರಹ. ವೇದಾಂತ ತತ್ವಗಳ ಮಣಿಗಳನ್ನು ಕೂಡಿಸಿ ಪೋಣಿಸಿದ ಮಣಿ ರತ್ನಮಾಲಾ ಸಾಧಕರಿಗೆ, ಜಿಜ್ಞಾಸುಗಳಿಗೆ ಸುಲಭವಾದ ಶೈಲಿಯಲ್ಲಿ ಶಂಕರಾಚಾರ್ಯರು ಮಾನವ ಜನಾಂಗಕ್ಕೆ ನೀಡಿದ ಜ್ಞಾನ ದೀಕ್ಷೆ. ಇಲ್ಲಿ ವಿಷಯ ಗಾಂಭೀರ್ಯ, ಭಾಷಾ ಭಾವ ಸರಳತೆ, ಛಂದೋಲಾಲಿತ್ಯ, ಎಲ್ಲಾ ವರ್ಗದವರನ್ನು ಆಕರ್ಷಿಸುತ್ತೆ. ಮುಮುಕ್ಷುಗಳಿಗೆ, ಪುರುಷಾರ್ಥ ಸಿದ್ಧಿಗಾಗಿ ಆಚರಿಸಬೇಕಾದ ಧರ್ಮ, ಕರ್ಮ, ಮರ್ಮಗಳನ್ನು ಇಲ್ಲಿ ಹೇಳಿದೆ. ಸಾಮಾನ್ಯ ಮಾನವರು ಇದರ ಅರ್ಥಗಳನ್ನು ಮನನಮಾಡಿ ಕೃತಾರ್ಥರಾಗಬಹುದು. ಸರಳ ಸಂಸ್ಕೃತ. ಪ್ರಶ್ನೆ ಉತ್ತರ, ಗುರು ಶಿಷ್ಯರ ಸಂವಾದ ರೂಪವಾಗಿ ಗೀತೆಯಂತೆ ಈ ಮಣಿರತ್ನಮಾಲಾ ಕೂಡ ಪ್ರಶ್ನೋತ್ತರ ವಿವೇಕ ಚೂಡಾಮಣಿಮೊದಲನೆಯ ಶ್ಲೋಕದಲ್ಲಿ ಶಿಷ್ಯನು ಗುರುವಿನಲ್ಲಿ ಶರಣು ಹೋಗಿ -

ಅಪಾರ ಸಂಸಾರ ಸಮುದ್ರಮಧ್ಯೇ<br>
ಸಂಮಜ್ಜತೋ ಮೇ ಶರಣಂ ಕಿಮಸ್ತಿ<br>
ಗುರೋ ಕೃಪಾಲೋ ಉತ್ತರ<br>
ಕೃಪಯಾ ವದೈತ<br>
ವಿಶ್ವೇಶ ಪಾದಾಂಬುಜ ದೀರ್ಘ ನೌಕಾ

ಹೇ ದಯಾಮಯ ಗುರುದೇವ. ಅಪಾರ ಸಂಸಾರ ಸಮುದ್ರದಲ್ಲಿ ಮುಳುಗದ ಹಾಗೆ ಉದ್ಧಾರವಾಗಲು ಯಾವ ಆಶ್ರಯವಿದೆ ಕೃಪೆಯಿಂದ ತಿಳಿಸು ಎಂಬುವ ಪ್ರಶ್ನೆಗೆ ಗುರುವಿನ ಉತ್ತರ - ವಿಶ್ವಪತಿ ಪರಮಾತ್ಮನ ಚರಣ ಕಮಲವೆಂಬ ಹಡಗು. ಶಂಕರರು ತಮ್ಮ ಭಜಗೋವಿಂದ ಸ್ತೋತ್ರದಲ್ಲಿ ಹುಟ್ಟಿಗೂ ಸಾವಿಗೂ ಮಧ್ಯದ ಕೊನೆ ಮೊದಲಿರದ ಸಂಸಾರವೆಂಬ ಘೋರ ಕಡಲನ್ನು ದಾಟಲು ನನ್ನನ್ನು ಪಾರಮಾಡಲು ಕೃಪೆ ತೋರು ಎಂಬುವಾಗ 'ಇಹಸಂಸಾರೇ ಬಹು ದುಸ್ತಾರೇ ಕೃಪಯಾ ಪಾರೇ ಪಾಹಿಮುರಾರೇ' ಎಂಬುವುದಾಗಿ ಶ್ರೀಕೃಷ್ಣನ ಕೃಪೆಯನ್ನು ಕೋರಿದ್ದಾರೆ. ಸಂಸಾರವು ದುಃಖಮಯ ವೆಂಬುವುದನ್ನು ತೋರಿಸಲು ಪುನರಪಿ ಜನನಂ ಪುನರಪಿ ಮರಣಂ ಪುನರಪಿ ಜನನೀ ಜಠರೇ





ಶಯನಂ ಎಂಬುವುದಾಗಿ ಹೇಳಿದ್ದಾರೆ. ಪ್ರಾಣಿಗಳಿಗೆ ಸಂಚಿತ, ಪ್ರಾರಬ್ಧ ಆಗಾಮಿ ಕರ್ಮಗಳು ನಿಶ್ಶೇಷವಾಗಿ ನಾಶವಾಗುವವರೆಗೂ ಜನನ ಮರಣಗಳ ಚಕ್ರದಿಂದ ಪಾರಾಗಲು ಕಷ್ಟ. ಇದರಿಂದ ತಪ್ಪಿಸಿಕೊಳ್ಳಲು ಅದ್ವೇಷಾದಿ ಸದ್ಗುಣಗಳುಳ್ಳವರಾಗಿ ಪರಮಾತ್ಮನಲ್ಲಿ ಶರಣು ಹೊಂದಿದರೆ, ಭಗವಂತನು ಪ್ರೀತನಾಗಿ ಆ ಚೇತನನ್ನು ಉದ್ಧಾರ ಮಾಡುತ್ತಾನೆ ಎಂಬುವುದು ಗ್ರಾಹ್ಯ -

**2ನೇ ರತ್ನ**

ವಂದೋಹಿ ಕೋ ಯೋ-
ವಿಷಯಾನುರಾಗೀ
ಕಾವಾ ವಿಮುಕ್ತಿ - ವಿಷಯೇ ವಿರಕ್ತಿಃ
ಕೋವಾಸ್ತಿ ಘೋರೋ ನರಕ ಸ್ವದೇಹಃ
ತೃಷ್ಣಾಕ್ಷಯಃ ಸ್ವರ್ಗಪದಂ ಕಿಮಸ್ತಿ
ನಿಶ್ಚಯವಾಗಿ ಬಂಧಿಸಲ್ಪಟ್ಟವನು ಯಾರು

ಉತ್ತರ – ವಿಷಯಾಸಕ್ತ. ವಿಮುಕ್ತಿಯೆಂಬುದು-ವಿಷಯಗಳಲ್ಲಿ ವೈರಾಗ್ಯ. ಘೋರ ನರಕವು ಯಾವುದು-ನಮ್ಮ ಶರೀರ. ಸ್ವರ್ಗ ಪದ ಯಾವುದೆಂದರೆ, ಆಶೆಯನ್ನು ನಾಶಗೊಳಿಸುವುದು.

ವಿಷಯಗಳಲ್ಲಿ ಆಸಕ್ತಿಯಾದರೆ, ಆಭೋಗಗಳಿಗೆ ಆಶೆಗೊಳಗಾದರೆ ಬಂಧಕಾರಣವಾಗುತ್ತೆ. ತನು ಮನ ಧನಗಳನ್ನು ಅಪಹರಿಸುವ ವಿಷಯಾನುರಾಗಿ ಆಗಬಾರದು. ಆಸೆಯನ್ನು ತೊರೆಯುವುದೇ ಪರಮಪದ. 'ಆಶಾಬಲವತೀ ಕಷ್ಟಂ ವೈರಾಗ್ಯಂ ಪರಮಂ ಸುಖಂ' ಎಂಬುವುದು ಸುಭಾಷಿತ. ಆದ್ದರಿಂದಲೇ 'ಆಶಾನಿರಾಶಾ ಕೃತ್ವಾತು ಸುಖಂ' ಎಂಬುವುದು ಸತ್ಯ. 'ಆಶಾಪರಮಂ ದುಃಖಂ, ನಿರಾಶಾ ಪರಮಂ ಸುಖಂ.' ಇದು ಎಂದೆಂದಿಗೂ ನಿಜ. 'ತೃಷ್ಣಾಯದಿ ಪರಿತ್ಯಕ್ತಾ ಕೋ ದರಿದ್ರಃ' -ಆಸೆಯನ್ನು ತೊರೆದವನೇ ಧನಿಕನು ಅವನೇ ಪರಮ ಸಂತೋಷಿ-

**3ನೇ ರತ್ನ**

ಸಂಸಾರಹೃತ್ಕಃ ಶ್ರುತಿಜಾತ್ಮಬೋಧಃ
ಕೋ ಮೋಕ್ಷಹೇತುಃ ಕಥಿತಃ ಸ ಏವ
ದ್ವಾರಂ ಕಿಮೇಕಂ ನರಕಸ್ಯ ನಾರೀ
ಕಾ ಸ್ವರ್ಗದಾ ಪ್ರಾಣಭೃತಾ ಮಹಿಂಸಾ॥

ಸಂಸಾರದಿಂದ ಪಾರಮಾಡುವುದು ಯಾವುದು? ವೇದದಿಂದ ಹುಟ್ಟಿದ ಆತ್ಮಜ್ಞಾನ. ಮೋಕ್ಷಕ್ಕೆ ಕಾರಣ ಯಾತರಿಂದ? ಅದು ಆತ್ಮಜ್ಞಾನದಿಂದ, ನರಕದ ಪ್ರಧಾನ ದ್ವಾರ ಯಾವುದು? ನಾರೀ. ಸ್ವರ್ಗಪ್ರಾಪ್ತಿ ಆಗುವುದು ಯಾವುದರಿಂದ? ಪ್ರಾಣಿಗಳಲ್ಲಿ ಅಹಿಂಸೆ ತೋರುವುದರಿಂದ. ಕುಲಶೇಖರರು ಭವಜಲಧಿಮಗಾಧಂ ದುಸ್ತರಂ ನಿಸ್ತರೇಯಂ ಎಂಬುವುದಾಗಿ ಹೇಳುವಾಗ ಅಗಾಧವಾದ ದುಸ್ತರವಾದ ಸಂಸಾರ ಸಾಗರವನ್ನು ದಾಟಲು ಮಾರ್ಗ-ಭಗವಂತನನ್ನು ಶರಣಾಗುವುದೇ ಎನ್ನುವರು. ಅನ್ಯಸ್ತ್ರೀಗೆ ಆಸೆ ಪಡುವುದು ಕಾಮಕ್ಕೆ ವಶವಾಗುವುದು ಮಹಾಪಾಪ. ಇವುಗಳೇ ನರಕಕ್ಕೆ ದಾರಿ.

**4ನೇ ಮಣಿರತ್ನ**

ಶೇತೇ ಸುಖಂ ಕಸ್ತು ಸಮಾಧಿ ನಿಷ್ಠೋ
ಜಾಗರ್ತಿ ಕೋವಾ ಸದಸದ್ವಿವೇಕೀ।
ಕಃ ಶತ್ರವಃ ಸಂತಿ ನಿಜೇಂದ್ರಿಯಾಣಿ
ತಾನ್ಯೇವ ಮಿತ್ರಾಣಿ ಜಿತಾನಿ ಯಾನಿ॥

ಸುಖದಿಂದ ಯಾರು ನಿದ್ರಿಸುತ್ತಾರೆ? ಯಾರು ಪರಮಾತ್ಮನ ಸ್ವರೂಪದಲ್ಲಿ ಸ್ಥಿತನಾಗಿರುತ್ತಾನೋ ಅವನು. ಯಾರು ಎಚ್ಚರವಾಗಿರುತ್ತಾರೆ? ಸತ್ ಅಸತ್ ತತ್ವವನ್ನು ತಿಳಿದವನು. ಶತ್ರು ಯಾರು? ಇಂದ್ರಿಯಗಳು. ಅವುಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡರೆ ಅವುಗಳೇ ಮಿತ್ರರು. ಆದ್ದರಿಂದಲೇ ನಮ್ಮ ಪೂರ್ವಿಕರು- ಪರಮಾನಂದಃ ಕಃ? ಎಂಬುವುದಕ್ಕೆ ಭಗವಂತನ ಸಾಕ್ಷಾತ್ಕಾರ ವುಂಟಾಗಿ ಅವನ ಸಾನ್ನಿಧ್ಯದಲ್ಲಿ ನಿತ್ಯವಾಸಮಾಡುವವನು ಎಂದರು. ಅಂದರೆ ಧ್ಯಾನ, ಮನನಗಳನ್ನು ಮಾಡುವವನು ಅಪರಿಮಿತವಾದ ಸುಖವಿಶೇಷವು, ಜೀವಾತ್ಮಾ ಪರಮಾತ್ಮನ ಜ್ಞಾನವನ್ನು ಹೊಂದಲು ಕರ್ಮೇಂದ್ರಿಯಗಳು ಐದು. ಜ್ಞಾನೇಂದ್ರಿಯ ಗಳು ಐದು. ಪ್ರಾಣಗಳು – ಇವುಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ವಿವೇಕದಿಂದ ನಡೆಯುವವನೇ ಸುಖಿ.

**ಐದನೆಯ ರತ್ನ**

ಕೋವಾ ದಿಂದ್ರೋ ಹಿ ವಿಶಾಲ ತೃಷ್ಣಃ
ಶ್ರೀ ಮಾರ್ಶ್ಚ ಕೋ ಯಸ್ಯ ಸಮಸ್ತ ತೋಷಃ
ಜೀವಾನ್ಮೃತಃ ಕಸ್ತು ನಿರುದ್ಯಮಾಯಃ
ಕಿಂ ವಾಽಮೃತಂ ಸ್ಯಾತ್ಸುಖದಾ ನಿರಾಶಾ॥

ದರಿದ್ರನು ಯಾರು? ಅಧಿಕ ಆಸೆಯುಳ್ಳವನು. ಐಶ್ವರ್ಯವಂತನು ಯಾರು? ಯಾರಿಗೆ ಎಲ್ಲದರಲ್ಲೂ ಸಂತೋಷವಿದೆಯೋ ಅವನು. ಬದುಕಿದ್ದರೂ ಸತ್ತಂತೆ ಇರುವವನು ಯಾರು? ಪುರುಷಾರ್ಥವಿಲ್ಲದವನು. ಅಮೃತವು ಯಾವುದು? ಆಸೆ ಇಲ್ಲದಿರುವುದು. ಆಸೆಯೆಂಬ ಏಣಿಯ ಮೆಟ್ಟಲಿಗೆ ತುದಿ ಇಲ್ಲ. ಕೊನೆ ಇಲ್ಲ. ತೃಪ್ತಿ ಇಲ್ಲ. ಕಾಮ, ಕ್ರೋಧ, ಲೋಭ ಮತ್ತು ಮೋಹಗಳು ಆಸೆಯೆಂಬ ದುಷ್ಟ ಪಿಶಾಚಿಯ ವಿವಿಧ ರೂಪಗಳು. ಮುಕುಂದಮಾಲೆಯಲ್ಲಿ ಕುಲಶೇಖರರು-

ತೃಷ್ಣಾತೋಯೇ ಮದನ ಪವನೋ
ದ್ಧೂತ ಮೋಹೋರ್ಮಿ ಮಾಲೇ
ದಾರಾವರ್ತೇ ತನಯ ಸಹಜ-
ಗ್ರಾಹ-ಸಂಘಾ ಕುಲೇಚ
ಸಂಸಾರಾಖ್ಯೇ ಮಹತಿ ಜಲಧೌ
ಮಜ್ಜತಾಂ ನಸ್ತ್ರಿಧಾಮನ್
ಪಾದಾಂಭೋಜ ವರದ ಭವತೋ
ಭಕ್ತಿನಾವಂ ಪ್ರಯಚ್ಛ॥

ತೃಷ್ಣೆಯೆಂಬುವ ನೀರು, ಕಾಮಕ್ರೋದಗಳೆಂಬ ಬಿರುಗಾಳಿ ಎದ್ದು, ಮಮತೆಯೆನ್ನುವ ಅಲೆಗಳಿಂದ, ಮಡದಿಮಕ್ಕಳೆಂಬ ಮೊಸಳೆಗಳಿಂದ ಕೂಡಿದ ಭಯಾನಕವಾದ ಸಂಸಾರ ಸಾಗರದಲ್ಲಿ ಮುಳುಗುತ್ತಿರುವ ನಮಗೆ ಪರಮಾತ್ಮನ ಭಕ್ತಿಯೆಂಬ ನಾವೆಯೇ ದಾಟಲು ಸಹಕಾರಿ.

**6 ನೇ ರತ್ನ**

ಪಾಶೋ ಹಿಮೇ ಮಮತಾಭಿಮಾನಃ
ಸಂಮೋಹಯತ್ಯೇವ ಸುರೇವ ಕಾ ಸ್ತ್ರೀ

ಕೋ ವಾ ಮಹಾಂಧೋ
ಮದನಾತುರೋ ಯೋ
ಮೃತ್ಯುಶ್ಚ ಕೋ ವಾಽಪಯಶಃ ಸ್ವಕೀಯಂ

ಬಂಧನವು ವಾಸ್ತವವಾಗಿ ನಾನು ನನ್ನದು ಎನ್ನುವ ಮಮಕಾರ. ಸಂಮೋಹವನ್ನು ಉಂಟುಮಾಡುವವಳು ನಾರೀ. ಕುರಡನು ಯಾರೆಂದರೆ ಕಾಮಾತುರನಾದವನು. ಅಪಕೀರ್ತಿಯೇ ಮೃತ್ಯು.

ಮುಂದಿನ 7 ರಲ್ಲಿ ಗುರುಭಕ್ತಿ ವಿಚಾರ. 8 ನೇ ಶ್ಲೋಕದಲ್ಲಿ ಉತ್ತಮ ಚರಿತ್ರೆ, ಶುದ್ಧ ಮನಸ್ಸು, ವೇದ ಮತ್ತು ಗುರು ವಚನ ಮಹಿಮೆ ಆಚಾರ್ಯರು ತಿಳಿಸುತ್ತಾರೆ. ಮುಂದೆ 9 ನೇ ಶ್ಲೋಕದಲ್ಲಿ ಸತ್ಸಂಗ ಸಾತ್ವಿಕದಾನ ಸ್ವರೂಪ, ಮನನ, ಮತ್ತು ಸಂತೋಷಗಳು ಪರಮಾತ್ಮನ ಪ್ರಾಪ್ತಿಗೆ ಸಾಧನಗಳು ಎಂಬುವುದಾಗಿ ತಿಳಿಸುತ್ತಾರೆ.

14 ನೇ ಶ್ಲೋಕದಲ್ಲಿ ಆಚಾರ್ಯರು-

ಏಷಾದ್ವಿಷಂ ಕಿಂ ವಿಷಯಾಃ ಸಮಸ್ತಾ।
ಕಿಂ ವಾ ವಿಧೇಯಂ ವಿದುಷಾ ಪ್ರಯತ್ನಾತ್
ಸ್ನೇಹಂ ಚ ಪಾಪಂ ಪಠಣಂ ಚ ಧರ್ಮಂ
ಸಂಸಾರ ಮೂಲಂ ಹಿ ಕಿಮಸ್ತಿ ಚಿಂತಾ ॥

ಸಂಸಾರದಲ್ಲಿ ಅತ್ಯಾಸಕ್ತನಾಗಿ ಪಾಪವನ್ನು ಮಾಡುವುದೇ ಸಂಸಾರಕ್ಕೆ ಮೂಲವು. ಸದ್ಗ್ರಂಥ ವ್ಯಾಸಂಗದಿಂದಲೂ ಧರ್ಮ ಕಾರ್ಯಗಳಲ್ಲಿ ಆಸಕ್ತಿಯಿಂದಲೂ ಸಂಸಾರಸಾಗರದಿಂದ ಪಾರಾಗಬಹುದು. ಮೇಧಾವಿಯಾಗಿದ್ದರೂ ಶಾಸ್ತ್ರಜ್ಞನಾಗಿದ್ದರೂ ಸಂಸಾರದಲ್ಲಿ ಆಸಕ್ತನಾದರೆ ತಮಸ್ಸಿನಿಂದ ಆವೃತನಾಗುತ್ತಾನೆ. ಸತ್ವಾತ್ ಸಂಜಾಯತೇ ಜ್ಞಾನವ್ ಎಂಬುವ ಗೀತಾ ವಾಕ್ಕಿನಂತೆ ಸತ್ವಗುಣವನ್ನು ಬೆಳೆಸಿಕೊಳ್ಳಲು ಆಚಾರ್ಯರು ತಮ್ಮ ವಿವೇಕ ಚೂಡಾಮಣಿಯಲ್ಲಿ -

ಮಿಶ್ರಸ್ಯ ಸತ್ತ್ವಸ್ಯ ಭವಂತಿ ಧರ್ಮಾ
ಸ್ತ್ವಮಾನಿತಾದ್ಯಾ ನಿಯಮಾ ಯಮಾದ್ಯಾಃ
ಶ್ರದ್ಧಾ ಚ ಭಕ್ತಿಶ್ಚ ಮುಮುಕ್ಷುತಾ ಚ
ದೈವೀ ಚ ಸಂಪತ್ತಿ ರಸನ್ನಿವೃತ್ತಿಃ ॥

ಅಮಾನಿತ್ವವೇ ಮೊದಲಾದುವುಗಳು ಯಮ, ನಿಯಮಗ್ಗಳೇ ಮೊದಲಾದವು- ಶ್ರದ್ಧೆ ಭಕ್ತಿ ಮುಮುಕ್ಷುತ್ವ, ದೈವೀ ಸಂಪತ್ತಿ ಅಸುರ ಸಂಪತ್ತಿಯನ್ನು ದೂರಮಾಡುವುದು - ಇವು ಸತ್ವದ ಧರ್ಮಗಳು. ಅಹಿಂಸೆ ಸತ್ಯ, ಅಕ್ರೋಧಃ ತ್ಯಾಗ, ಶಾಂತಿ, ನಿಂದನೆ ಮಾಡದಿರುವುದು. ದಯಾಭೂತೇಷು, ವಿಷಯಗಳಲ್ಲಿ ನಿರಾಸಕ್ತಿ -ಇವುಗಳು ಯಮಗಳು. ಶೌಚ, ಸಂತೋಷ, ಕ್ಷಮೆ, ಧೃತಿ, ಯಾರಲ್ಲೂ ವೈರತ್ವವಿಲ್ಲದ್ದು - ನಿಯಮಗಳು. ಮನಸ್ಸಿನ ಪ್ರಸನ್ನತೆ, ತೃಪ್ತಿ ಸದಾ ಆಹ್ಲಾದ, ಪರಮಾತ್ಮನಲ್ಲಿ ನಿತ್ಯಭಕ್ತಿ - ಇವು ವಿಶುದ್ಧ ಸತ್ವದ ಗುಣಗಳು. ಮುಂದೆ ಆಚಾರ್ಯರು ಮೂರ್ಖ. ನೀಚ ದುಷ್ಟ ಮತ್ತು ಪಾಪಿಗಳ ಸಂಗಮಾಡಬಾರದು. ಸತ್ಸಂಗ ಮಮತಾತ್ಯಾಗ ಮತ್ತು ಪರಮೇಶ್ವರನ ಭಕ್ತಿ ಮುಮುಕ್ಷುವಿಗೆ ಉಪಕರಣಗಳೆಂದು ತಿಳಿಸಿ, ಯಾರನ್ನೂ ಏನನ್ನೂ ಬೇಡದೆ ಪುನರ್ಜನ್ಮವಿಲ್ಲದ ತತ್ವವನ್ನು ತಿಳಿದು ಉತ್ತಮವಾದ ಆಚರಣೆ (ತತ್ತ್ವಜ್ಞಾನ ತನ್ನಿಷ್ಠೆ) ಸದಾ ಅಭಯದಾನ ಇವುಗಳು ಶ್ರೇಷ್ಠ ಸಂಪತ್ತು. ಮನುಷ್ಯನಿಗೆ ಪರಮ ಶತ್ರುಗಳ ವಿಚಾರ 21 ನೇ ಶ್ಲೋಕದಲ್ಲಿ -

ಶತ್ರೋರ್ಮಹಾ ಶತ್ರುತಮೋಸ್ತಿ ಕೋವಾ
ಕಾಮಃ ಸಕೋಪಾ ನೃತ ಲೋಭ ತೃಷ್ಣಾಃ
ನಪೂರ್ಯತೇ ಕೋ ವಿಷಯೈಃ ಸ ಏವ
ಕಿಂ ದುಃಖಮೂಲಂ ಮಮತಾಭಿಮಾನಂ

ಶತ್ರುಗಳಲ್ಲಿ ಮಹಾ ಶತ್ರು ಯಾರು? ಕ್ರೋಧ. ಸುಳ್ಳು, ಲೋಭ, ಆಸೆಯಿಂದ ಕೂಡಿದ ಕಾಮ, ಯಾರು ವಿಷಯ ಭೋಗದಲ್ಲಿ ತೃಪ್ತನಾಗುವುದಿಲ್ಲ? ಅಧಿಕ ಕಾಮಾಸಕ್ತನು. ದುಃಖಕ್ಕೆ ಕಾರಣ ಯಾವುದು? ಮಮತೆಯೆಂಬ ದೋಷ. ಈ ವಿಷಯವನ್ನೇ ಆಚಾರ್ಯರು ತಮ್ಮ ವಿವೇಕ ಚೂಡಾಮಣಿಯಲ್ಲಿ - ಅಹಂ ಮಮೇತಿ ಪ್ರಥಿತಂ ಶರೀರಂ ಮೋಹಾಸ್ಪದಂ ಸ್ಥೂಲ ಮಿತೀರ್ಯತೇ ಬುಧೈಃ 'ಎನ್ನುವರು. ನಾನು ನನ್ನದು ಎಂದು ಪ್ರಸಿದ್ಧವಾಗಿ, ಮೋಹಕ್ಕೆ ಆಸ್ಪದವಾಗುವ ಇವುಗಳು ಸ್ಥೂಲ ಶರೀರವೆಂದು ವಿದ್ವಾಂಸರ ಅಭಿಪ್ರಾಯ. ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳು - ಇವುಗಳು ಅಂತಃಶತ್ರುಗಳು. ಕಾಮ, ಕ್ರೋಧಾದಿಗಳು ರಜೋಗುಣಗಳ ಸ್ವಭಾವ. ವಿಷಯಭೋಗಗಳು ಎಷ್ಟಾದರೂ ತೃಷ್ಣೆ ತೀರದು. ಅರಿಷಡ್ವರ್ಗಗಳಲ್ಲಿ ಜ್ಯೇಷ್ಠ ಭ್ರಾತೃ ಕಾಮವನ್ನು ಗೆದ್ದರೆ ಎಲ್ಲವನ್ನೂ ಗೆದ್ದಂತೆ. ಅದಕ್ಕೋಸ್ಕರವೇ ಗೀತಾಚಾರ್ಯನು ಎರಡನೆಯ ಅಧ್ಯಾಯದ 77 ನೇ ಶ್ಲೋಕದಲ್ಲಿ-

ವಿಹಾಯ ಕಾಮಾನ್ ಯಃ ಸರ್ವಾ
ಪುಮಾಂಶ್ಚರದಿನಿಃ ಸ್ಪೃಹಃ
ನಿರ್ಮಮೋ ನಿರಹಂಕಾರಃ
ಸ ಶಾಂತಿ ಮಧಿ ಗಚ್ಛತಿ ।

ಯಾವ ಪುರುಷನು ಎಲ್ಲಾ ಆಸೆಗಳನ್ನು ತ್ಯಜಿಸಿ ಮಮತಾರಹಿತ ಮತ್ತು ಅಹಂಕಾರ ರಹಿತ ಮತ್ತು ನಿಸ್ಪೃಹನಾಗಿ ಇರುತ್ತಾನೋ ಆತನು ಶಾಂತಿಯನ್ನು ಪಡೆಯುತ್ತಾನೆ - ಎಂಬುವುದಾಗಿ ಬೋಧಿಸಿದ್ದಾನೆ.

22 ನೇ ಶ್ಲೋಕದಲ್ಲಿ ವಿದ್ವತ್ತು, ಅಹಿಂಸೆ, ಭಗವತ್ ಪ್ರೇಮಗಳಿಂದ ಯಾರೂ ಶೋಚನೆಗೆ ಒಳಗಾಗುವುದಿಲ್ಲವೆಂದು ತಿಳಿಸಿ 23, 24, 25 ಶ್ಲೋಕಗಳಲ್ಲಿ ಪ್ರಾಣ ಪ್ರಮಾಣ ಸಮಯದಲ್ಲಿ ಮುರಾರಿ ಚಿಂತನೆ ಮಾಡುವುದು ಎಂಬ ಕುಲಶೇಖರರ ಮುಕುಂದಮಾಲೆಯ-

ಪ್ರಾಣ ಪ್ರಯಾಣ ಸಮಯೇ
ಕಫವಾತ ಪಿತ್ತೈಃ
ಕಂಠಾವರೋಧನವಿಧೌ
ಸ್ಮರಣಂ ಕುತಸ್ತೇ

ಎಂಬುವ ಶ್ಲೋಕದ ನೆನಪು ಬಂದು ಪ್ರಾಣೋತ್ಕ್ರಮಣ ಕಾಲದಲ್ಲಿ ಕಫವಾತ ಪಿತ್ತಗಳಿಂದ ಗಂಟಲು ಕಟ್ಟಿರುವಾಗ ಹೇಕೃಷ್ಣ ನಿನ್ನ ಸ್ಮರಣೆ ಬರಲಿ ಎಂಬುವ ಅಂಶವನ್ನೇ ಆಚಾರ್ಯರು-

ಉಪಸ್ಥಿತೇ ಪ್ರಾಣಹರೇ ಕೃತಾಂತೇ
ಕಿಮಾಸು ಕಾರ್ಯಂ ಸುಧಿಯಾ ಪ್ರಯತ್ನಾತ್
ವಾಕ್ಕಾಯ ಚಿತ್ತೈಃ ಸುಖದಂ ಯಮಘ್ನಂ
ಮುರಾರಿ ಪಾದಾಂಬುಜ ಚಿಂತನಂ ಚ




## ಸಪ್ತಗಿರಿ
### ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಲ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಜಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

ಮಿಕ್ಕ ವಿವರಗಳಿಗೆ :

**ಸಂಪಾದಕರು,**

ಸಪ್ತಗಿರಿ,

ತಿ. ತಿ. ದೇವಸ್ಥಾನಗಳು, ತಿರುಪತಿ - 517507,

ಚಿತ್ತೂರು ಜಿಲ್ಲೆ, ಆಂ.ಪ್ರ.


ಎಂಬುವುದರಲ್ಲಿ ಅಭಿಪ್ರಾಯ ಪಟ್ಟಿದ್ದಾರೆ. 26 ನೇ ಶ್ಲೋಕ ಸುಂದರ ಸುಭಾಷಿತ-

ಕುತೋ ಹಿ ಭೀತಿಃ ಸತತಂ ವಿಧೇಯಾ
ಲೋಕಾಪವಾದಾದ್ಭವ ಕಾನನಾಚ್ಚ
ಕೋವಾತಿ ಬಂಧುಃ ಪಿತರಶ್ಚ ಕೇವಾ
ವಿಪತ್ಸಹಾಯಾಃ ಪರಿಪಾಲಕಾಯೆ

ನಿರಂತರ ಯಾರಿಗೆ ಭಯಪಡಬೇಕು? ಲೋಕ ನಿಂದೆನೆಗೆ. ಸಂಸಾರವೆಂಬ ವನಕ್ಕೆ ಅತ್ಯಂತ ಪ್ರಿಯ ಬಂಧುವು ಯಾರು? ಆಪತ್ತಿನಲ್ಲಿ ಸಹಾಯ ಮಾಡುವವನು, ತಂದೆಯು ಯಾರು? ಸಕಲ ವಿಧದಲ್ಲಿ ಪಾಲಿಸಿ ಪೋಷಿಸ ತಕ್ಕವನು. ಲೋಕ ನಿಂದನೆ ಲೋಕಾಪವಾದಕ್ಕೆ ಅಂಜಬೇಕು ಎಂಬುವುದು ಲೋಕಾಭಿರಾಮನಿಂದ ನಾವು ಪಾಠ ಕಲಿಯಬೇಕು. ಸೀತೆಯ ಬಗ್ಗೆ ಜನಾಪವಾದವನ್ನುಕೇಳಿದ ರಾಮ ತನಗೆ ಅತ್ಯಂತ ಪ್ರಿಯಳಾದ ಸೀತೆಯನ್ನು, ಹಿಂದೆ ಅಗ್ನಿಯಲ್ಲಿ ಶುದ್ಧಳಾದ ಜಾನಕಿಯನ್ನು, ಗರ್ಭವತಿಯಾದ ಅವಳನ್ನು, ಅಪವಾದಕ್ಕೆ ಅಂಜಿ ಅಭಿರಾಮನು ಅಯೋನಿಜೆಯನ್ನು ಅಡವಿಗೆ ಅಟ್ಟುತ್ತಾನೆ. ಈ ದುರ್ದೈವ ಸನ್ನಿವೇಶವನ್ನು ಭವಭೂತಿಯ ಉತ್ತರ ರಾಮ ಚರಿತೆಯಲ್ಲಿ ನಾವು ಕಾಣಬಹುದು.

ಅಂತಃಪುರದಲ್ಲಿ ಸ್ನೇಹಿತ ದುರ್ಮುಖನು ರಾಮನಿಗೆ ಸೀತೆಯ ಬಗ್ಗೆ ಜನಾಪವಾದವನ್ನು ತಿಳಿಸಿದಾಗ ರಾಮನು -

ಸತಾಂ ಕೇನಾಪಿ ಕಾರ್ಯೇಣ
ಲೋಕಸ್ಯಾರಾಧನಂ ವ್ರತಂ
ಯತ್ಪೂರಿತಂ ಹಿ ತಾತೇನ
ಮಾಂ ಚ ಪ್ರಾಣಾಶ್ಚ ಮುಂಚಿತಾ

ಹೇಗಾದರೂ ಸರಿ ಜನರನ್ನು ಸಂತೋಷಗೊಳಿಸುವುದೇ ಸಜ್ಜನರ ವ್ರತ. ನನ್ನ ಪೂರ್ವಿಕರು ತಮ್ಮ ಪ್ರಾಣವನ್ನೂ ತೊರೆದು ಹಿಂದೆ ಪಾಲಿಸಿದ್ದಾರೆ. ನನ್ನ ಧರ್ಮವೂ ಅದೇ ಆಗಿದೆ. ಸೀತೆಯು ಅಗ್ನಿಪರೀಕ್ಷೆಯಲ್ಲಿ ಶುದ್ಧಳಾಗಿ ಬಂದಿರುವುದು ನನಗೆ ತಿಳಿದೇ ಇದೆ. ಅಗ್ನಿ ಪರೀಕ್ಷೆಯ ವೇಳೆಯಲ್ಲಿ ಇಲ್ಲಿನ ಜನರು ಅಲ್ಲಿರಲಿಲ್ಲವಲ್ಲ. ಅದು ಬಹು ದೂರದ ಪ್ರದೇಶ. ಹೇಗೆ ಇವರಿಗೆ ತಿಳಿದೀತು. ರಾಜಧರ್ಮಕ್ಕೂ ಪತಿ ಧರ್ಮಕ್ಕೂ ಘರ್ಷಣೆ ಬಂದಾಗ, ಪ್ರಜಾರಂಜನೆಯೇ ನನ್ನ ಗುರಿ ಆದರ್ಶ - ಎಂಬುವುದಾಗಿ ಶ್ರೀರಾಮನು ತಿಳಿಸುತ್ತಾನೆ. ಜನಾಪವಾದಕ್ಕೆ ಅಂಜಿ, ಪ್ರಜೆಗಳನ್ನು ಮೆಚ್ಚಿಸಲು ಪ್ರಾಣಕ್ಕಿಂತ ಹೆಚ್ಚಿನ ಸೀತಾಮಾತೆಯನ್ನೇ ತೊರೆದನು. ಆಚಾರ್ಯರ ರತ್ನಮಾಲೆಯಲ್ಲಿ ಈ ಮಣಿ ಶ್ರೇಷ್ಠ ರತ್ನವಾಗಿದೆ. ಅತ್ಯಂತ ಪ್ರಿಯ ಬಂಧುವು ಸಂಕಷ್ಟಕಾಲದಲ್ಲಿ ಸಹಾಯಮಾಡುವವನು. ಎಲ್ಲಾ ಕಾಲದಲ್ಲೂ ಪ್ರೇಮದಿಂದ ಪಾಲಿಸುವವನೇ ಪಿತೃ, ಎಷ್ಟು ಸತ್ಯವಾದ ಸುಭಾಷಿತ. ಯಾವುದನ್ನು ತಿಳಿಯಬೇಕು ಎಂಬುವಾಗ ಆಚಾರ್ಯರು ಮುಂದಿನ 5 ಶ್ಲೋಕಗಳಲ್ಲಿ ಶುದ್ಧ, ವಿಜ್ಞಾನ, ಕಲ್ಯಾಣರೂಪೀ ಸರ್ವಾಂತಃ ಸ್ವರೂಪ ಪರಿಪೂರ್ಣ ಪರಮಾತ್ಮನನ್ನು ತಿಳಿದು ಸದ್ಗುರು, ಸತ್ಸಂಗ ಶಾಸ್ತ್ರಾಧ್ಯಯನ ಮಾಡಿ ಪಾಪಕರ್ಮ ಗಳನ್ನು ಮಾಡದೆ ಭಗವದ್ಧ್ಯಾನದಲ್ಲಿ ನಿರತನಾಗಿರುವುದು. ಈ ಭಾವವನ್ನೇ ಆಚಾರ್ಯರು ತಮ್ಮ ಭಜಗೋವಿಂದದ ಕೊನೆಯ ಶ್ಲೋಕದಲ್ಲಿ -

ಗೇಯಂ ಗೀತಾ ನಾಮ ಸಹಸ್ರಂ
ಧ್ಯೇಯಂ ಶ್ರೀಪತಿರೂಪ ಮಜಸ್ರಮ್
ನೇಯಂ ಸಜ್ಜನ ಸಂಗತಿ ಮನಿಶಂ
ದೇಯಂ ದೀನ ಜನಾಯ ಚ ವಿತ್ತಂ

ಗೀತಾ ಪಾರಾಯಣ, ವಿಷ್ಣು ಸಹಸ್ರನಾಮ ಪಠಣ, ಸಾಧು ಸಜ್ಜನರ ಸಹವಾಸ, ದಾಮೋದರನಲ್ಲಿ ತೈಲಧಾರೆಯಂತೆ ಧ್ಯಾನ, ನಿರ್ಹೇತುಕ ಪ್ರೇಮ, ದೀನಜನರಲ್ಲಿ ಧನ ಸಹಾಯ ಎಂದಿರುವರು. ಕೊನೆಯ ಮಣಿರತ್ನಮಾಲಾ ಶ್ಲೋಕ ಫಲಶ್ರುತಿ -

ಕಂಠಂ ಗತಾ ವಾ ಶ್ರವಣಂ ಗತಾವಾ
ಪ್ರಶ್ನೋತ್ತರಾಖ್ಯಾ ಮಣಿರತ್ನಮಾಲಾ
ತನೋತು ಮೋದಂ ವಿದುಷಾಂ ಸುರಮ್ಯಂ
ರಮೇಶ ಗೌರೀಶ ಕಥೇವ ಸತ್ಯಃ

★★★★★



ಕೊನೆಗೆ ನೀನೆ ಕಾಯಬೇಕೊ.

# ಗೋದಾದೇವಿ

**- ಜಿ. ಕೆ. ಶ್ರೀಮತಿ.**

ಮಾನವರಿಗೆ ಇಹಲೋಕದ ಜೀವನಕ್ಕೆ ಆಹಾರ, ಪಾನೀಯ, ವಾಯು ಮುಂತಾದುವು ಎಷ್ಟು ಅವಶ್ಯಕತೆಯೋ, ಹಾಗೆಯೆ, ಪರಲೋಕದಲ್ಲಿ ಪುಣ್ಯಪ್ರಾಪ್ತಿಗೆ, ಮೋಕ್ಷ ಸಾಧನೆಗೆ, ಪೂಜೆ, ಜಪ, ತಪ, ಸತ್ಸಂಗ, ಧ್ಯಾನ, ದಿವ್ಯಪ್ರಬಂಧಗಳ ವಾಚನ, ತೀರ್ಥಕ್ಷೇತ್ರಗಳ ಪರ್ಯಟನೆ, ದೇವಾಲಯಗಳಲ್ಲಿ ದೇವರ ದಿವ್ಯ ದರುಶನ ಅಷ್ಟೇ ಅತ್ಯಾವಶ್ಯಕ. ಈ ದಿಸೆಯಲ್ಲಿ ಉತ್ತರದಲ್ಲಿ ಭಕ್ತ ತುಲಸೀದಾಸರು, ಕಬೀರದಾಸರು, ಮೀರಾ ಇವರಂತೆ ದಕ್ಷಿಣದಲ್ಲಿ ಭಕ್ತ ತ್ಯಾಗರಾಜರು, ಪುರಂದರದಾಸರು, ಕನಕದಾಸರು ಇವರು ಭಕ್ತಿ ಪಂಥದಲ್ಲಿದ್ದವರು. ಇವರಂತೆಯೇ ವಿಷ್ಣುಭಕ್ತರಾಗಿದ್ದ ಹನ್ನೆರಡು ಆಳ್ವಾರರುಗಳಲ್ಲಿ ಆಂಡಾಳ್ ಕೂಡ ಒಬ್ಬರು.

ದಕ್ಷಿಣಭಾರತದಲ್ಲಿ ಶ್ರೀವಿಲ್ಲಿ ಪುತ್ತೂರಿನಲ್ಲಿ ವಾಸವಾಗಿದ್ದ ಪೆರಿಯಾಳ್ವಾರರೆಂದು ಹೆಸರು ಪಡೆದ ವಿಷ್ಣುಚಿತ್ತರ ಸಾಕು ಮಗಳಾಗಿ ಆಂಡಾಳ್ ಜನ್ಮವೆತ್ತಿದಳು.

ಪೆರಿಯಾಳ್ವಾರರು ಶ್ರೀವಿಲ್ಲಿಪುತ್ತೂರಿನ ಆರಾಧ್ಯದೈವವಾದ 'ವಟಪತ್ರಶಾಯಿ' ಗೋಸ್ಕರ ತಾವೇ ಬೆಳೆಸಿದ ಹೂ ವನಗಳಿಂದ ವಿಧವಿಧವಾದ ಹೂಗಳಾದ ಮಲ್ಲಿಗೆ, ಪಾರಿಜಾತ, ಚಂಪಕ, ಜಾಜಿ, ಮದರಂಗಿ, ತುಳಸಿ, ಮರುಗ, ಪಚ್ಚೆತೆನೆ, ಕಮಲ, ಕನ್ನೆದಿಲೆಗಳಿಂದ ತಯಾರಿಸಿದ ತುಳಸೀ ಮಾಲೆಗಳನ್ನು ಹಾಗೂ ತೋಮಾಲೆಗಳನ್ನು ಕಟ್ಟಿ ಪೂಜೆಯ ವೇಳೆಗೆ ಸಕಾಲದಲ್ಲಿ ದೇವರಿಗೆ ಅರ್ಪಿಸಿ ಸೇವೆಮಾಡುವ ದಿನನಿತ್ಯದ ಕೈಂಕರ್ಯದಲ್ಲಿ ಮುಳುಗಿದ್ದರು.

ಹೀಗಿರಲು ಒಂದು ದಿನ ತುಳಸೀವನದಲ್ಲಿ ಗಿಡಗಳ ಪಾತಿಗಳನ್ನು ಒಪ್ಪಮಾಡುತ್ತಿದ್ದಾಗ, 'ಜನಕಮಹಾರಾಜನಿಗೆ ಸೀತಾದೇವಿ ದೊರಕಿದಂತೆ' ಪ್ರಕಾಶಮಾನವಾಗಿ ಕಂಗೊಳಿಸುತ್ತಿರುವ ಓರ್ವ ಹೆಣ್ಣು ಶಿಶುವೊಂದು ಗೋಚರಿಸಿತು. ಭೂದೇವಿಯ ವರಪ್ರಸಾದವೆಂದು ಭಾವಿಸಿ, ಭೂದೇವಿಯ ಅವತಾರವಾದ ಆ ಮಗುವಿಗೆ 'ಗೋದಾ' ಎಂದು ನಾಮಕರಣ ಮಾಡಿದರು. ಆ ಮಗುವನ್ನು ತಾನೇ ತಾಯಿಯ ಸ್ಥಾನದಲ್ಲಿ ನಿಂತು ಸಲಹತೊಡಗಿದರು. ಮಗುವು ದಿನದಿನಕ್ಕೆ ಹುಣ್ಣಿಮೆಯ ಚಂದ್ರದಂತೆ ಲಾವಣ್ಯದಿಂದ ಬೆಳೆಯತೊಡಗಿತು. ಗೋದೆಯು ಬೆಳೆಯುತ್ತಿದ್ದ ಹಾಗೆಯೆ, ತಂದೆ ಪೆರಿಯಾಳ್ವಾರ್‌ರವರ ಜೊತೆಯಲ್ಲಿ ಹೂದೋಟಗಳಲ್ಲಿ ತನ್ನ ಪುಟ್ಟ ಹೆಜ್ಜೆಗಳನ್ನಿಡುತ್ತಾ ಪುಟ್ಟ ಕೈಗಳಿಂದ ತುಳಸಿ ಮತ್ತು ಹೂಗಳನ್ನು ಬಿಡಿಸುವುದು, ಬುಟ್ಟಿಯಲ್ಲಿ ಹಾಕುವುದು, ಅವುಗಳ ಅಂದಚೆಂದಗಳನ್ನು ನೋಡಿ ನಲಿಯುವುದು, ಮಾಲೆಗಳನ್ನು ಕಟ್ಟಿ ಮುಗಿಸಿದ ನಂತರ ತನ್ನ ತಂದೆಯವರ ಜೊತೆಯಲ್ಲಿ ದೇವರ ಸನ್ನಿಧಿಗೆ ತೆರಳಿ ಅಲ್ಲಿ ಅರ್ಚಕರು ವಟಪತ್ರಶಾಯಿಗೆ ಮಾಲೆಗಳಿಂದ ಅಲಂಕಾರ ಮಾಡುವುದನ್ನು ಕಣ್ತುಂಬ ನೋಡಿ ತಲ್ಲೀನಳಾಗಿ ಆನಂದಿಸುತ್ತಿದ್ದುದು ಆಕೆಯ ನಿತ್ಯಚರಿಯಾಗಿತ್ತು.

ಕಾಲಕಳೆದಂತೆ, ಗೋದಾ ಎಂಟು ವರುಷದ ಬಾಲಕಿಯಾದಳು. ತಂದೆಯವರ ಮಾರ್ಗದರ್ಶನದಲ್ಲಿ ಸದಾ ಹರಿನಾಮಸ್ಮರಣೆ, ವಟಪತ್ರಶಾಯಿಯ ಸೇವೆ, ಶ್ರೀಕೃಷ್ಣ ಜಪ ಮುಂತಾದುವೇ ಜೀವನದ ದಿನನಿತ್ಯದ ದಿವ್ಯಮಂತ್ರವಾಯಿತು. ದೇವರ ಧ್ಯಾನದಿಂದ ಊಟ ನಿದ್ರೆಗಳಲ್ಲೂ ಬಾಲಕಿ ಗೋದೆಗೆ ಅಭಿರುಚಿ ಇಲ್ಲವಾಯಿತು. ನಿತ್ಯವೂ ದೇವರ ವಿಗ್ರಹಗಳನ್ನಿಟ್ಟುಕೊಂಡು ಪೂಜಿಸುತ್ತಿದ್ದಳು.

ಹೀಗೆ ಕಾಲಕ್ರಮೇಣ ಒಂದು ದಿನ ತಂದೆ ಪೆರಿಯಾಳ್ವಾರರು ವಟಪತ್ರಶಾಯಿಗೆಂದು ಹೂ ಬುಟ್ಟಿಯ ತುಂಬ ಹೂವಮಾಲೆ ತುಳಸೀ ಮಾಲೆಗಳನ್ನು ಇಟ್ಟಿದ್ದರು. ಗೋದೆಯು ಮಯಸ್ಸಿಗೆ ತಕ್ಕ ಕುತೂಹಲದಿಂದ ಬುಟ್ಟಿಯಲ್ಲಿ ಸುತ್ತಿಟ್ಟಿದ್ದ ಹೂಮಾಲೆ ತುಳಸೀಮಾಲೆಗಳನ್ನು ತನ್ನ ಕೈಗೆ ತೆಗೆದುಕೊಂಡು ಅವುಗಳ ಅಂದಚೆಂದಗಳನ್ನು ನೋಡಿ ಅಲಂಕಾರ ಭರಿತನಾಗಿದ್ದ ವಟಪತ್ರಶಾಯಿಯ ದಿವ್ಯವಿಗ್ರಹ ತನ್ನ ಕಣ್ಣ ಬಂದಂತಾಗಿ ಅದೇ ಹೊತ್ತಿನಲ್ಲಿ ದೇವರ ಕಟಾಕ್ಷವಾಗಿ, ಆ ಮಾಲೆಗಳನ್ನು ಒಂದೊಂದಾಗಿ ತಾನು ಧರಿಸಿ ಆನಂದಭರಿತಳಾಗಿ ಅಲ್ಲಿಯೇ ಇದ್ದ ನಿಲುವು ಕನ್ನಡಿಯಲ್ಲಿ ತನ್ನ ಸೌಂದರ್ಯವನ್ನು ತಾನೆ ನೋಡಿಕೊಂಡು ಹೆಮ್ಮೆಯಿಂದಲೂ ಭಕ್ತಿಯಿಂದಲೂ ತಾನೂ ಸಹ ದೇವರಿಗೆ ತಕ್ಕ ನಾಯಕಿಯೆಂದು ಮನದಲ್ಲೇ ಸಂತೋಷಿಸಿ, ಏನೂ ಅರಿಯದವಳಂತೆ ಮತ್ತೆ ಹೂಮಾಲೆಗಳನ್ನು ಕಳಚಿ ಹಾಗೆಯೇ ಸುತ್ತಿ ಬುಟ್ಟಿಯಲ್ಲಿ ಇಟ್ಟಳು. ಅದೇ ನಿತ್ಯದ ಅಭ್ಯಾಸವಾಯಿತು. ಅದನ್ನೆಲ್ಲಾ ಅರಿಯದ ಪೆರಿಯಾಳ್ವಾರರು ಮಾಲೆಗಳನ್ನು ಹಾಗೆಯೇ ದೇವರಿಗೆ ಸಮರ್ಪಿಸುತ್ತಿದ್ದರು. ಬಾಲಕಿ ಗೋದಾಳ ಈ ಪರಿಯ ಭಕ್ತಿಯ ಆಟಗಳು ಪೆರಿಯಾಳ್ವಾರರಿಗೆ ತಿಳಿಯದೆ ಹೋಯಿತು.





# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ.ಟಿ.ರಸ್ತೆ, ತಿರುಪತಿ, (ಆಂ.ಪ್ರ.),
(ನೋಂದಣಿ ಸಂಖ್ಯೆ - 18/94)

ಡಾ|| ಪಿ. ಕೃಷ್ಣಯ್ಯ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,

ಪ್ರಿಯ ದಾನಿಗಳೆ;

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ, ನಮ್ಮ ದೇಶದಲ್ಲಿ ಅಗತ್ಯವಿದ್ದವರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದಲೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ. ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ.

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ. ತಿ. ದೇವಸ್ಥಾನಗಳಿಂದ ಆರಂಭವಾಯಿತು. ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾತರ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ.

**ಈ ಯೋಜನೆಯ ವಿವರಗಳು :**

I. ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದು ಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು.

1. ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು.
2. ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು.
3. ದಾನಿಯ ಐದುಮಂದಿಗೆ ಉಚಿತವಾಗಿ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಜ್ಞಾಪಿಕೆಯನ್ನು ನೀಡಲಾಗುವುದು. ವರ್ಷಕ್ಕೆ ಒಮ್ಮೆ ಉತ್ತರೀಯ ಬಹುಮಾನ ನೀಡಲಾಗುವುದು.
5. 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ.

II. ಎಸ್. ವಿ. ನಿತ್ಯಾನ್ನದಾನಯೋಜನೆಗೆ ತಮ್ಮ ವಂತಿಗೆಯಾಗಿ ಒಂದು ಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ.) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಬಹುದಾಗಿದೆ.

**ದಾನಗಳನ್ನು ಹೇಗೆ ಕಳುಹಿಸಬೇಕು :**

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ. ಡಿ. ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ, ಆಂಧ್ರಪ್ರದೇಶ. ಇವರಿಗೆ ಕಳುಹಿಸಬೇಕು.

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ :
**ಕಾರ್ಯನಿರ್ವಹಣಾಧಿಕಾರಿ,**
ತಿ.ತಿ.ದೇ. ಪರಿಪಾಲನಾಭವನ - ತಿರುಪತಿ - 517 501.

ಅದೇ ದಿನ, ಮಗಳನ್ನು ದೇವರ ಸೇವೆಗಾಗಿ [illegible] ಬಂದ ಪೆರಿಯಾಳ್ವಾರರು ಗೋದೆ [illegible] ನೋಡಿಬಿಟ್ಟರು. ಗೋದೆಯು [illegible]ದ ಮನ ಬಹಳ ನೊಂದಿದವರಾಗಿ [illegible]ದ ಕಣ್ಣು ತುಂಬಿ ಬಂದು 'ಎಂತಹ ಕೆಲಸ[illegible]ಬಿಟ್ಟಿ, ಮಗಳೇ-ನೀ ಮುಡಿದು ನಿ[illegible] ಮಾಲೆಗಳನ್ನು ಇನ್ನು ವಟಪತ್ರಶಾಯಿಗೆ ಹೇಗೆ ಸಮರ್ಪಿಸಲಿ' ಎಂದು ದುಃಖಿತರಾಗಿ ಆ ದಿನ ದೇವಾಲಯಕ್ಕೆ ಹೋಗಲಿಲ್ಲ. ಮಾಲೆಗಳನ್ನು ದೇವರಿಗೆ ಸಮರ್ಪಿಸದೆ, ಮನೆಯಲ್ಲೆ ಆಹಾರಪಾನೀಯಗಳನ್ನು ತ್ಯಜಿಸಿ ಚಿಂತಾಕ್ರಾಂತರಾಗಿ ಕುಳಿತುಬಿಟ್ಟರು. ಬಾಲಕಿ ಗೋದೆಗೆ ತಾನು ಮಾಡಿದ ಅಚಾತುರ್ಯದಿಂದ ತಂದೆ ದುಃಖಿತರಾಗಿರುವುದು ಅರಿವಾಯಿತು.

ಅದೇ ದಿನ, ರಾತ್ರಿ 'ವಟಪತ್ರಶಾಯಿ' ಭಕ್ತಪರಾಧೀನರಾದ 'ವಿಷ್ಣುಚಿತ್ತ'ರ ಕನಸಿನಲ್ಲಿ ಕಾಣಿಸಿಕೊಂಡು 'ಭಕ್ತನೇ, ಈ ದಿನ ನನಗೆ ಮಾಲೆಗಳನ್ನು ತರುವುದನ್ನು ಮರೆತೆಯಾ?' ಎಂದರು. ನಡೆದ ಸಮಸ್ತ ವಿಷಯಗಳನ್ನೂ ದೇವರಲ್ಲಿ ಅರಿಕೆಮಾಡಿದ ಪೆರಿಯಾಳ್ವಾರರಿಗೆ ಕರುಣಾಮಯನಾದ ವಟಪತ್ರಶಾಯಿಯು

'ಗೋದೆಯು ಮುಡಿದ ಮೇಲಯೇ ಅಲ್ಲವೇ, ಮಾಲಗಳಿಗೆ ಸುಗಂಧದ ಪರಿಮಳ ಹೆಚ್ಚಾದುದು, ಆದ್ದರಿಂದ ನೀನು ಚಿಂತಿಸದೆ ಎಂದಿನಂತೆ ಗೋದೆಯು ತನ್ನ ಭಕ್ತಿಯಿಂದ ಮುಡಿದು ತೆಗೆದಿಟ್ಟ ಮಾಲೆಗಳನ್ನೇ ನನಗೆ ಸಮರ್ಪಿಸು, ಅವೇ ನನಗೆ ಪ್ರಿಯವಾದವು' ಎಂದು ಹೇಳಿ [illegible]. ಅಲ್ಲಿಂ[illegible] ಗೋದೆಯ ಮಹಿಮೆ [illegible] ಗೋದೆಯು ದೇವಿಯ ಅವತಾರವಲ್ಲದೆ ಬೇರೇನೂ ಆಗಿರಲು ಸಾಧ್ಯವಿಲ್ಲವೆಂದು ಅರಿತು ಅಂದಿನಿಂದ ಗೋದಾದೇವಿಯೆಂದು ತನ್ನ ಮಗಳನ್ನು ಕರೆದು ಗೋದೆಯು ಮುಡಿದು ತೆಗೆದಿರಿಸಿದ ಮಾಲೆಗಳನ್ನೇ ವಟಪತ್ರಶಾಯಿಗೆ ಸಮರ್ಪಿಸುತ್ತಿದ್ದರು. ಹೀಗೆ ಗೋದೆಯು 'ಶೂಡಿಕ್ಕೊಡುತ್ತ

ನಾಚ್ಚಿಯಾರ್' ಆದಳು. (ಮುಡಿದು ಕೊಟ್ಟ ನಾಯಕಿ)

ಕ್ರಮೇಣ, ಗೋದಾದೇವಿ ಪ್ರಾಪ್ತವಯಸ್ಸಿಗೆ ಬಂದಳು. ಪೆರಿಯಾಳ್ವಾರರಿಗೆ ಮಗಳ ವಿವಾಹದ ಚಿಂತೆ ಪ್ರಾರಂಭವಾಯಿತು. ಗೋದಾದೇವಿ ಯಾದರೋ, ತಾನು ಸಾಕ್ಷಾತ್ ವಿಷ್ಣುವನ್ನು ಹೊರತು ಮತ್ತಾರನ್ನೂ ವಿವಾಹವಾಗಲಾರೆನೆಂದು ತಂದೆಗೆ ಹೇಳಿ ಬಿಟ್ಟಳು. ರಾತ್ರಿ ಹಗಲೂ ದೇವರ ಧ್ಯಾನದಲ್ಲಿ ನಿರತಳಾಗಿ ದೇವರನ್ನು ನಾಯಕನಾಗಿ ಪಡೆಯಲು ಹಿಂದೆ ಗೋಕುಲದ ಗೋಪಿಯರು ಕೃಷ್ಣನ ನ್ನು ಪಡೆಯುವುದಕ್ಕಾಗಿ ವ್ರತ ನಡೆಸಿ ಕೃತಾರ್ಥಯರಾದಂತೆ ತಾನೂ ಕೂಡ ಮಾರ್ಗಶೀರ್ಷ ಮಾಸದಲ್ಲಿ 30 ದಿನಗಳು ವ್ರತವನ್ನು ಆಚರಿಸಿ ತನ್ನ ಮನಸ್ಸಿನ ಭಾವನೆಗಳನ್ನು 'ತಿರುಪ್ಪಾವೈ' ಪದ್ಯ (ಪಾಶುರ) ಗಳ ಮೂಲಕ ಲೋಕಕ್ಕೆಲ್ಲಾ ತಿಳಿಸಿದ್ದಾಳೆ. (ಗೋದಾದೇವಿಯು 'ತಿರುಪ್ಪಾವೈ' ಮಾತ್ರವೇ ಅಲ್ಲದೆ 143 ಪದ್ಯಗಳ 'ನಾಚ್ಚಿಯಾರ್ ತಿರುಮೊಳಿ' ಎಂಬ ದಿವ್ಯಪ್ರಬಂಧವನ್ನೂ ರಚಿಸಿದ್ದಾಳೆ. ಇದರಲ್ಲಿ ವ್ರತದ ಮಹತ್ವ, ವ್ರತದ ಕಾಲ, ಆಚರಣೆ, ವ್ರತದ ಸಮಯದಲ್ಲಿ ನಡೆ ನುಡಿ ಮುಂತಾದುವನ್ನೆಲ್ಲಾ ತಿಳಿಯ ಪಡಿಸಿರುತ್ತಾಳೆ.)

ಇಹಲೋಕದ ಪರಿವೆ ಇಲ್ಲದೆ ಸದಾ ದೇವರ ಧ್ಯಾನದಲ್ಲಿ ಮಗ್ನಳಾದ ಮಗಳು ದೇವರಲ್ಲಿಟ್ಟಿರುವ ಅನನ್ಯ ಭಕ್ತಿ ಜ್ಞಾನ, ವೈರಾಗ್ಯಗಳನ್ನು ನೋಡಿ ಇಹಲೋಕದ ಸಾಂಸಾರಿಕ ಜೀವನಕ್ಕೆ ಅಣಿಗೊಳಿಸಲು ಆಲೋಚಿಸಿ ಮಗಳನ್ನು ಪ್ರೀತಿಯಿಂದ ಹತ್ತಿರ ಕರೆದು 'ಮಗಳೇ, ಹೇಳು? ನೀನು ಯಾವ ಕ್ಷೇತ್ರದೇವರನ್ನು ವಿವಾಹ ವಾಗಬಯಸುತ್ತೀಯೆ?' ಎಂದು ಕೇಳಿ ಹಲವು ದಿವ್ಯಕ್ಷೇತ್ರಗಳಲ್ಲಿ ವೈಭವದಿಂದ ವಿರಾಜ ಮಾನರಾಗಿದ್ದ ದೇವರುಗಳ ಗುಣಾತಿಶಯಗಳನ್ನು ಕಣ್ಣುಂಬುವಂತೆ ವರ್ಣಿಸಿದರು. ಗೋದೆಗೆ ಯಾವುದೂ ಮನಸ್ಸಿಗೆ ಸರಿಬರಲಿಲ್ಲ. ನಂತರ ಶ್ರೀರಂಗಕ್ಷೇತ್ರದಲ್ಲಿ ವಿರಾಜಮಾನರಾಗಿರುವ ಶ್ರೀರಂಗನಾಥನ ಗುಣಾತಿಶಯಗಳಿಗೆ ಮರುಳಾಗಿ ಭಕ್ತಿಯಿಂದ ಆ ದೇವರನ್ನೇ ವರಿಸುವುದಾಗಿ ತಂದೆಗೆ ತಿಳಿಸಿದಳು. ಮಗಳ ಈ ಪರಿಯ ಮಾತಿನಿಂದ ಪೆರಿಯಾಳ್ವಾರರಿಗೆ ದಿಕ್ಕು ತಿಳಿಯದೆ ಯೋಚಿಸಲಾರಂಭಿಸಿದರು.

ಒಂದು ದಿನ, ರಾತ್ರಿ ಕನಸಿನಲ್ಲಿ ಶ್ರೀ ರಂಗನಾಥ ಸ್ವಾಮಿ ಗೋಚರಿಸಿ, 'ಗೋದಾದೇವಿಯನ್ನು ತನಗೆ ವಿವಾಹಮಾಡಿ ಕೊಡಬೇಕೆಂದು' ಹೇಳಿ ಚಿಂತೆ ನಿವಾರಣೆ ಮಾಡಿದನು. ಆಳ್ವಾರರು ಆನಂದಪರವಶರಾಗಿ ಭಗವಂತನ ನಿಯಮಾನುಸಾರ ಆಂಡಾಳಳನ್ನು ಮಂಗಳ ವಾದ್ಯಗಳೊಂದಿಗೆ, ಸಕಲ ಮರ್ಯಾದೆಗಳಿಂದ ಶ್ರೀರಂಗ ಕ್ಷೇತ್ರದ ಶ್ರೀರಂಗನಾಥರ ದಿವ್ಯಸನ್ನಿಧಿಗೆ ಕರೆದುಕೊಂಡು ಹೋಗಿ ಸಮರ್ಪಿಸಿದರು.

ಆದರೆ, ಲೋಕಾರೂಢಿಯಂತೆ ಮತ್ತೆ ಶ್ರೀರಂಗನಾಥರೇ ಶ್ರೀವಿಲ್ಲಿಪುತ್ತೂರಿಗೆ ತಾನೇ ಬಂದು ಗೋಪಿಯ ಕೈಹಿಡಿಯುವುದಾಗಿ ಆಳ್ವಾರರಿಗೆ ಅಪ್ಪಣೆ ಕೊಡಿಸಿ, ಸಕಲ ಪರಿಕರಗಳೊಂದಿಗೆ ಶ್ರೀವಿಲ್ಲಿಪುತ್ತೂರಿಗೆ ದಯಮಾಡಿ ಅಲ್ಲಿ ವಟಪತ್ರಶಾಯಿಯ ಸನ್ನಿಧಿಯಲ್ಲಿ ಶಾಸ್ತ್ರಕ್ಕೆ ಅನುಗುಣವಾಗಿ, ಯಥಾವಿಧಿಯಾಗಿ ವಿವಾಹ ಮಹೋತ್ಸವವನ್ನು ಅತ್ಯಂತ ವೈಭವದಿಂದ ನಡೆಸಿಕೊಂಡು ಆಂಡಾಳಳಿಗೆ ಪತಿಯಾಗಿ ವಿರಾಜಮಾನ ರಾದರು. ಈ ವಿವಾಹವನ್ನು ನಡೆಸಿಕೊಟ್ಟು ಪೆರಿಯಾಳ್ವಾರರು ಸಾಕ್ಷಾತ್ ಶ್ರೀರಂಗನಾಥರಿಗೇ ಮಾವನೆನಿಸಿಕೊಂಡರು, ಧನ್ಯರಾದರು.

ಆಂಧ್ರಪ್ರದೇಶ, ಕರ್ನಾಟಕ, ತಮಿಳು ನಾಡು, ಕೇರಳಗಳಲ್ಲಿ ನೆಲೆಸಿರುವ ವಿಷ್ಣು ಭಕ್ತರಾದ ಶ್ರೀವೈಷ್ಣವರಿಗೆಲ್ಲ ಆಂಡಾಳ್ ಮನೆಮನೆಯ ಆರಾಧನೆಯ ದೇವತೆ ಯಾಗಿರುವುದೇ ಅಲ್ಲದೆ ಎಲ್ಲ ಸ್ತ್ರೀಯರಿಗೂ ಮ ಕುಟಪ್ರಾಯಳಾಗಿದ್ದಾಳೆ. ಮಾಸಗಳಲ್ಲೇ ಅತ್ಯಂತ ಪವಿತ್ರವಾದ ಮಾರ್ಗಶೀರ್ಷ (ಧನು) ಮಾಸದ 30 ದಿನಗಳಲ್ಲಿ ಶ್ರೀವೈಷ್ಣವ ಭಕ್ತರೆಲ್ಲರೂ ಅರುಣೋದಯಕ್ಕೆ ಮುಂಚೆಯೇ ಮಿಂದು ಮಡಿಯಿಂದ ದೇವರ ಪೂಜೆ ಮಾಡಿ 'ಪೊಂಗಲು' ಪ್ರಸಾದವನ್ನು ಭಕ್ತಿಯಿಂದ ದೇವರಿಗೆ ನೈವೇದ್ಯ ಮಾಡಿ 'ತಿರುಪ್ಪಾವೈ' ಪಾಶುರ (ಪದ್ಯ)ಗಳನ್ನು ಪ್ರತಿ ದಿನ ಒಂದೊಂದು ಪಾಶುರವನ್ನು ಹಾಡಿ (30 ಪದ್ಯಗಳನ್ನೂ ಹಾಡಲು ಸಾಧ್ಯವಾಗದಿದ್ದಲ್ಲಿ) ದೇವರ ಕೃಪೆಗೆ ಪಾತ್ರರಾಗುವರು.

ಪ್ರತಿದಿನವೂ ತಿರುಪ್ಪಾವೈ ಪಠನ ಒಳ್ಳೆಯದೇ ಆದರೂ ಮಾರ್ಗಶೀರ್ಷ ಮಾಸದಲ್ಲಿ ವಿಶೇಷವಾಗಿ ಪಠಿಸುವುದರಿಂದ ಮೋಕ್ಷಸಾಧನೆಗೆ ಸುಗಮ ಹಾದಿಯೆಂದು ನಂಬಿಕೆ. ದ್ರಾವಿಡವೇದಗಳೆಂದು ಪ್ರಸಿದ್ಧವಾದ 'ದಿವ್ಯಪ್ರಬಂಧ'ಗಳಲ್ಲಿ ಒಂದಾದ 'ತಿರುಪ್ಪಾವೈ' ಪಠನದಿಂದ ವಿವಾಹವಾಗದೇ ಇರುವ ಕನ್ಯೆಗಳಿಗೆ ವಿವಾಹಯೋಗ ಲಭಿಸುತ್ತದೆ. ಹೇಗೆಂದರೆ, ಗೋದಾದೇವಿಯು ಶ್ರೀರಂಗನಾಥನನ್ನು ಪಡೆಯಲು ಅನನ್ಯ ಭಕ್ತಿಯಿಂದ ಕಠಿಣವಾದ ವ್ರತಗಳನ್ನು ಆಚರಿಸಿ ಸಾಧಿಸಿದಳು. ದ್ವಾಪರಯುಗದಲ್ಲಿ ಗೋಪಿಯರು ಕಾತ್ಯಾಯನೀ ವ್ರತವನ್ನು ಆಚರಿಸಿ ಶ್ರೀಕೃಷ್ಣನನ್ನು ಪಡೆದರು. ಕಲಿಯುಗದಲ್ಲಿ ಗೋದಾದೇವಿಯು ಶ್ರೀವಿಲ್ಲಿಪುತ್ತೂರನ್ನೇ ಗೋಕುಲವೆಂದು ಭಾವಿಸಿ, ತನ್ನ ಗೆಳತಿಯರನ್ನೇ ಗೋಪಬಾಲೆಯರೆಂದು ತಿಳಿದು ವಟಪತ್ರಶಾಯಿಯನ್ನೇ ಶ್ರೀಕೃಷ್ಣನೆಂದು ದೃಢಸಂಕಲ್ಪ ಮಾಡಿ ಗೆಳತಿಯರೊಡನೆ ವ್ರತಾಚರಣೆ ನೆರವೇರಿಸಿ ಸಾಕ್ಷಾತ್ ಶ್ರೀರಂಗನಾಥನನ್ನೇ ವರಿಸಿದಳು.

ರುದ್ರ ಧನುಸ್ಸನ್ನು ಮುರಿದ ಶ್ರೀರಾಮಚಂದ್ರನಿಗೆ ಸೀತಾದೇವಿ ಒಲಿದಳು, ರುಕ್ಮಿಣಿಯ ಪ್ರೇಮ, ದೈವಭಕ್ತಿಗೆ ಶ್ರೀಕೃಷ್ಣ ಒಲಿದ. ಇನ್ನು ಪಾರ್ವತಿಯಾದರೋ, ಕಠಿಣ ತಪಸ್ಸನ್ನಾಚರಿಸಿ ಪರಶಿವನನ್ನು ಪಡೆದಳು. ಅಂತೆಯೇ ಗೋದಾದೇವಿಯೂ ಕೂಡ ಶ್ರೀರಂಗನಾಥನನ್ನು ಪಡೆದಳು.

ಶ್ರೀವಿಲ್ಲಿಪುತ್ತೂರಿನ ಪ್ರಕೃತಿ ಸೌಂದರ್ಯದ ವಾತ್ಸಲ್ಯದ ಭಗವದ್ಭಕ್ತಿಯ ಪ್ರತೀಕವಾದ ಗೋದಾದೇವಿ ರಂಗನಾಥನನ್ನು ಒಲಿದು ಅವನನ್ನು ಪಡೆಯಬೇಕೆಂಬ ಏಕಾಗ್ರ ನಿಷ್ಠೆಯಿಂದ ವ್ರತಮಾಡಿ ಕೃತಕೃತ್ಯಳಾದದ್ದು ಆದರ್ಶವೂ ಹೌದು. ★



# ಶ್ರೀ ವೆಂಕಟೇಶ್ವರ ಗೋಸಂರಕ್ಷಣ ಟ್ರಸ್ಟ್

(ನೋಂದಣಿ ಸಂ. 8/2002)



ಗೋ ಸಂರಕ್ಷತಿ ರಕ್ಷಿತಃ । ವರದೇ ಗೋಷು ಸಂಪನ್ನಮ್

ಹಸುವಿನ ಪೋಷಣೆ ಹಾಗೂ ರಕ್ಷಣೆಗಳು ಪ್ರತಿಯೊಬ್ಬ ಹಿಂದುವಿನ ಪವಿತ್ರ ಕರ್ತವ್ಯವಾಗಿದೆ. ಗೋಮಾತೆಯು ಶಾಂತಿಯನ್ನೂ ಸಮೃದ್ಧಿಯನ್ನೂ ಸಂಕೇತಿಸುವಳು. ತಿರುಮಲೆ ತಿರುಪತಿ ದೇವಾಲಯಗಳ ಶ್ರೀ ವೆಂಕಟೇಶ್ವರ ಡೈರಿ ಫಾರಂ ಹಸುಗಳ ಸಂರಕ್ಷಣೆ ಪಾಲನೆಗಳ ವಿಷಯದಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದೆ. ಶ್ರೀ ಎಸ್. ವಿ. ಡೈರಿ ಫಾರಂನಲ್ಲಿ ಸುಮಾರು ಐದುನೂರು ಹಸುಗಳಿದ್ದು, ತಿ.ತಿ.ದೇ. ಆಲಯಗಳಿಗೆ, ಅರ್ಚನೆ ಅಭಿಷೇಕ ಪ್ರಸಾದಗಳಿಗೆ ಹಾಗೂ ತಿ.ತಿ.ದೇ. ಸಂಸ್ಥೆಗಳಾದಂತಹ ಎಸ್.ವಿ. ಬಾಲಮಂದಿರ, ಕುಷ್ಠನಿವಾರಣಾ ಕೇಂದ್ರ, ಬಧಿರ ಮೂಗ ಪಾಠಶಾಲೆ, ಎಸ್.ವಿ. ಅಂಗವಿಕಲರ ತರಬೇತಿ ಶಾಲೆ, ಆಸ್ಪತ್ರೆಗಳು ಮೊದಲಾದ ಸಂಸ್ಥೆಗಳಿಗೆ ದಿನನಿತ್ಯ ಅಗತ್ಯವಾಗುವ ಕ್ಷೀರವನ್ನು ಕೊಡುತ್ತಿವೆ.

ಇದೀಗ ತಿ. ತಿ. ದೇವಸ್ಥಾನಗಳು ಶ್ರೀ ವೆಂಕಟೇಶ್ವರ ಗೋಸಂರಕ್ಷಣ ಟ್ರಸ್ಟ್ ಅನ್ನು ಆರಂಭಿಸಿದೆ. ಇಲ್ಲಿನ ಉದ್ದೇಶ ದನಗಳನ್ನು ಪರಿರಕ್ಷಿಸುವುದು, ಸಾರ್ವಜನಿಕರು ನೀಡತಕ್ಕ ದನಗಳ ಪಾಲನೆ, ಪೋಷಣೆ, ಬೇಸಾಯದ ಬಡವರಿಗೆ, ಜಮೀನು ರಹಿತ ಬೇಸಾಯದ ಕೂಲಿಗಾರರಿಗೆ ನೀಡಲು ತಕ್ಕಂತೆ ಅವುಗಳನ್ನು ಪರಿರಕ್ಷಿಸುವುದು - ಆಗಿದೆ.

ಈ ಕ್ಷೇತ್ರದಲ್ಲಿ ಶ್ರೀ ವೆಂಕಟೇಶ್ವರ ಭಕ್ತಿ ಪ್ರಚಾರ ಪೀಠದ ಶ್ರೀ ವಾಡ್ರೇವು ಗವರ್ರಾಜು ಸ್ವಾಮಿಜೀ ಅವರು ಗೋಮಾತೆಗೆ ಅರ್ಪಣಾ ಮನೋಭಾವದಿಂದ ಕೆಲಸ ನಡೆಸಿದ್ದು ಶ್ರೀ ವೆಂಕಟೇಶ್ವರ ಗೋಸಂರಕ್ಷಣ ಟ್ರಸ್ಟ್‌ಗೆ ಒಂದು ಕೋಟಿ ರೂಪಾಯಿಗಳನ್ನು ಅರ್ಪಿಸಲಿದ್ದಾರೆ. ಈ ಟ್ರಸ್ಟನ್ನು ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾದ ಶ್ರೀ ಪಿ. ಚಲಪತಿರಾವ್ ಅವರು, ಕಂಚಿಪೀಠದ ಶ್ರೀ ಶ್ರೀ ವಿಜಯೇಂದ್ರ ಸರಸ್ವತಿ ಸ್ವಾಮಿಜೀ ಅವರ ಸನ್ನಿಧಿಯಲ್ಲಿ 2002 ರ ಸೆಪ್ಟಂಬರ್ 22 ರಂದು ತಿ.ತಿ.ದೇ. ಡೈರಿಫಾರಂ ಆವರಣದಲ್ಲಿ ಉದ್ಘಾಟಿಸಲಾಯಿತು. ಈ ಟ್ರಸ್ಟ್‌ಗಾಗಿ ಉದಾರವಾಗಿ ದಾನಗಳನ್ನು ನೀಡಬೇಕೆಂದು ಕೋರಲಾಗಿದೆ.

**ನಾಲ್ಕು ಬಗೆಯ ದಾನಗಳು ಪಡೆಯತಕ್ಕ ಸೌಲಭ್ಯಗಳು ಹೀಗಿವೆ.**

## 1. ಕಾಮಧೇನು : ದಾನದ ಮೊಬಲಗು : 5,00,000 ರೂಪಾಯಿಗಳು

**ಸೌಲಭ್ಯಗಳು :** * ಒಂದು ಬಾರಿ ಶ್ರೀವಾರಿ ಮಹಾಪ್ರಸಾದದ ಹತ್ತು ಪೊಟ್ಟಣ. *ಸ್ವಾಮಿ ಹಾಗೂ ಅಮ್ಮನವರ ಚಿನ್ನದ ಮುಲಾಮಿನ ಪದಕ - ಒಂದು ಬಾರಿ. ಪ್ರತಿ ವರ್ಷ ಒಂದು ರೇಷ್ಮೆ ಉತ್ತರೀಯ ಹಾಗೂ ಕುಪ್ಪಸದ ಕಣ. *ದಾನಿಗಳನ್ನು ಬರುವ ಗೋಕುಲಾಷ್ಟಮಿಯ ದಿನದಂದು (ಮೊದಲೇ ಸುದ್ದಿ - ಆಹ್ವಾನ ನೀಡಿ) ಎಸ್.ವಿ. ಡೈರಿ ಫಾರಂನಲ್ಲಿ ಸತ್ಕರಿಸಲಾಗುವುದು. *ವರ್ಷಕ್ಕೆ ಒಮ್ಮೆ ದಾನಿಯ ಕುಟುಂಬದ ಐದುಮಂದಿಗೆ ಸೆಲ್ಲಾರ್ ಮೂಲಕ ಪ್ರವೇಶದಲ್ಲಿ ದರ್ಶನಾವಕಾಶ ಒದಗಿಸಲಾಗುವುದು. *ವರ್ಷಕ್ಕೆ ಒಮ್ಮೆ ಮೂರುದಿನ (ಐದು ಮಂದಿಗೆ) ಏ.ಆರ್.ಪಿ. ಕೌಂಟರ್ ಪ್ರಾಂತ್ಯದಲ್ಲಿ ಉಚಿತವಸತಿ ಅಥವಾ ದೊರೆಯುವಂತಿದ್ದಲ್ಲಿ ಶುಲ್ಕ ಸಹಿತ ವಿ.ಐ.ಪಿ. ವಸತಿ. *ಪ್ರತಿವರ್ಷ ಹತ್ತು ಲಾಡುಗಳ ಉಚಿತ ಪ್ರಸಾದ. * ದಾನಿಗಳು ಕೋರಿದ ಶುಕ್ರವಾರದಂದು ಪ್ರತಿವರ್ಷ ಸ್ವಾಮಿಯ ಅಭಿಷೇಕಕ್ಕೆ ಐದು ಲೀಟರ್ ಹಾಲು ನೀಡಲಾಗುವುದು. *ತಿರುಪತಿಯ ಶ್ರೀ ವೆಂಕಟೇಶ್ವರ ಗೋ ಸಂರಕ್ಷಣ ಶಾಲೆಯಲ್ಲಿ ದಾನಿಯ ಹೆಸರಿನ ಶಾಸನ ಹಾಕಿಸಲಾಗುವುದು. *ಈ ಎಲ್ಲ ಸೌಲಭ್ಯಗಳೂ ದಾನಿಯ ಜೀವನ ಕಾಲದಲ್ಲಿಯೂ, ದಾನವು ಸಂಸ್ಥೆ/ಸಂಯುಕ್ತವಾದಲ್ಲಿ ಇಪ್ಪತ್ತು ವರ್ಷವೂ ದೊರೆಯುವುವು.

## 2. ಕ್ಷೀರಸಾಗರಂ : ದಾನದ ಮೊಬಲಗು : 1,00,000 ದಿಂದ 5,00,000 ರೂಗಳ ವರೆಗಿನ ದಾನ

**ಸೌಲಭ್ಯಗಳು :** * ಶ್ರೀವಾರಿ ಮಹಾಪ್ರಸಾದದ ಐದು ಪೊಟ್ಟಣ. * ಬರುವ ಗೋಕುಲಾಷ್ಟಮಿಯ ದಿನದಂದು ಎಸ್.ವಿ. ಡೈರಿಫಾರಂನಲ್ಲಿ ದಾನಿಯ ಸನ್ಮಾನ ನಡೆಯುವುದು. * ಒಂದು ಬಾರಿ ಸೆಲ್ಲಾರ್ ಮೂಲಕ ಸ್ವಾಮಿಯ ದರ್ಶನದ ಅವಕಾಶ - ಐದು ಮಂದಿಗೆ. * ಎಸ್.ವಿ. ಗೋ ಸಂರಕ್ಷಣ ಶಾಲೆಯಲ್ಲಿ ದಾನಿಯ ಹೆಸರಿನ ಶಾಸನ. * ದಾನಿಯ ಆಯ್ಕೆಯ ದಿನದಂದು ಶುಕ್ರವಾರ ವರ್ಷಕ್ಕೆ ಒಮ್ಮೆ ಸ್ವಾಮಿಗೆ ಅಭಿಷೇಕಕ್ಕೆ ಒಂದು ಲೀಟರ್ ಹಾಲು ನೀಡಲಾಗುವುದು.

## 3. ಬೃಂದಾವನ : ದಾನದ ಮೊಬಲಗು : 10,000 ದಿಂದ 1,00,000 ರೂಗಳ ವರೆಗಿನ ದಾನ

**ಸೌಲಭ್ಯಗಳು :** *ಶ್ರೀವಾರಿ ಮಹಾಪ್ರಸಾದದ ಎರಡು ಪೊಟ್ಟಣ. *ದಾನಿಯ ಆಯ್ಕೆಯ ಒಂದು ಶುಕ್ರವಾರ ಸ್ವಾಮಿಗೆ ಅಭಿಷೇಕಕ್ಕೆ ಒಂದು ಲೀಟರ್ ಹಾಲು.

## 4. ಗೋಪಾಲ : ದಾನದ ಮೊಬಲಗು : 1,000 ನಿಂದ 10,000 ರೂಗಳ ವರೆಗಿನ ದಾನ

**ಸೌಲಭ್ಯಗಳು :** * ಶ್ರೀವಾರಿ ಮಹಾಪ್ರಸಾದದ ಎರಡು ಪೊಟ್ಟಣ.

**ದಾನಗಳ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ. ಇವರ ಹೆಸರಿನಲ್ಲಿ ಪಡೆದು**

**ನಿರ್ದೇಶಕರು, ಎಸ್.ವಿ. ಡೈರಿಫಾರಂ, ತಿರುಪತಿ - 517502 - ಇವರಿಗೆ ಕಳುಹಿಸಬೇಕು.**

**ದೂರವಾಣಿ - 08574 - 48140.**

**ಎಲ್ಲ ದಾನಗಳೂ ಆದಾಯಕರ ನಿಯಮದ 80 (ಜಿ) (5) (vi) ರ ಪ್ರಕಾರ ಕರಮುಕ್ತವಾಗಿವೆ.**

# ತಿರುಮಲೆ - ತಿರುಪತಿ - ತಿರುಚಾನೂರು

ಆಂಗ್ಲಮೂಲ : ಎಂ. ರಾಮರಾವ್.
ಅನುವಾದ : ಎಸ್.ವಿ. ಹೇಮಾವತಿ.

## ತಿರುಚಾನೂರು ಆಲಯಗಳು

ತಿರುಪತಿಯಿಂದ ದಕ್ಷಿಣಕ್ಕೆ ಮೂರು ಮೈಲಿ ದೂರದಲ್ಲಿ ತಿರುಚಾನೂರು ಗ್ರಾಮ ಇದೆ. ಪ್ರಾಚೀನ ಕಾಲದಲ್ಲಿ ಈ ಹಳ್ಳಿಯನ್ನು ತಿರುಚುಕನೂರು, ತಿರುಚೋಗಿನೂರ್ - ಎಂದೂ ಕರೆಯಲಾಗುತ್ತಿತ್ತು. ಈಚಿನ ಒಂದು ಶಾಸನವು ಶ್ರೀ ಶುಕಗ್ರಾಮ ಎಂದೂ ಕರೆಯುತ್ತದೆ. ತಿರುಚೋಗಿನೂರು ಎಂಬುದು ಈಗ ತಿರುಚಾನೂರಿನ ಪಶ್ಚಿಮಕ್ಕಿರುವ ಜೋಗಿ ಮಲ್ಲಾವರವಾಗಿದೆ. ಹದಿನಾರನೆಯ ಶತಮಾನದಲ್ಲಿ ತಿರುಚಾನೂರನ್ನು 'ವಾದಿರಾಜಪುರ' ಎಂದೂ ಕರೆಯಲಾಗುತ್ತಿತ್ತು. ಪಲ್ಲವರ ಕಾಲದಲ್ಲಿ ತಿರುವೇಂಗಡ ಕೊಟ್ಟಂಗೆ ಸೇರಿದ ಕುಡುವೂರ ನಾಡಿನಲ್ಲಿ ತಿರುಚಾನೂರು ಇದ್ದಿತು. ಚೋಳರ ಕಾಲದಲ್ಲಿ ಈ ಪ್ರಾಂತ್ಯವನ್ನು ರಾಜೇಂದ್ರ ಚೋಳ ಮಂಡಲ ಅಥವಾ ಜಯಂಗೊಂಡ ಚೋಳಮಂಡಲ ಎಂದು ಕರೆಯಲಾಗುತ್ತಿತ್ತು.

ಪ್ರಾಮುಖ್ಯ : ತಿರುಚಾನೂರು ತಿರುಪತಿ ಪ್ರಾಂತ್ಯದಲ್ಲಿನ ಚರಿತ್ರೆಯಲ್ಲಿ - ಇಲ್ಲಿನ ಧಾರ್ಮಿಕ ಚಟುವಟಿಕೆಗಳ ಬೆಳವಣಿಗೆಯಲ್ಲಿ ಅತಿ ಮುಖ್ಯ ಪಾತ್ರವನ್ನು ವಹಿಸಿದ್ದಿತು. ಕ್ರಿ.ಶ. 8 ನೇ ಶತಮಾನದ ಆರಂಭದ ಹೊತ್ತಿಗೆ ಈ ಪ್ರಾಂತ್ಯವು ವೈಷ್ಣವ ಪ್ರಭಾವಕ್ಕೆ ಒಳಗಾಗಿದ್ದಿತು. 9ನೇ ಶತಮಾನದ ಕಾಲಕ್ಕೆ ಇಲ್ಲಿ ವೈಷ್ಣವ ನೆಲೆ ಉಂಟಾಗಿದ್ದಿತು. ಆ ಹೊತ್ತಿಗೆ ತಿರುಮಲೆಯೂ ಶ್ರೀ ವೆಂಕಟೇಶ್ವರಸ್ವಾಮಿಯೂ ಪ್ರಸಿದ್ಧವೇ ಆಗಿದ್ದರೂ ತಿರುಮಲೆಯ ಪರ್ವತಾವಳಿ ದುರ್ಗಮವಾಗಿದ್ದು, ಸಾಮಾನ್ಯ ಯಾತ್ರಿಕರನ್ನು ಬಹುಸಂಖ್ಯೆಯಲ್ಲಿ ಸೆಳೆಯುತ್ತಿರಲಿಲ್ಲ. ತಿರುಚಾನೂರಿನ ವೈಷ್ಣವರು ಇಲ್ಲಿಯೇ ತಿರುಮಂತ್ರಶಾಲೆಯೊಂದನ್ನು ನಿರ್ಮಿಸಿ ತಮ್ಮ ಧಾರ್ಮಿಕ ಚಟುವಟಿಕೆಯನ್ನು ನಡೆಸಿಕೊಂಡು ಬಂದರು. ಒಂದು ತಿರುವಿಳಂ ಕೋಯಿಲನ್ನು ಕಟ್ಟಿ ವೇಂಗಡದ ಬೆಟ್ಟದ ದೇವರನ್ನು ಹೋಲುವ ಮತ್ತೊಂದು ವೇಂಕಟೇಶ್ವರಸ್ವಾಮಿಯನ್ನು ಆ ದೇವರ ಪ್ರತಿನಿಧಿಯಾಗಿ ಸ್ಥಾಪಿಸಿದರು. ತಿರುಚಾನೂರು ಬಯಲು ಭೂಮಿಯಲ್ಲಿ ಇದ್ದುದರಿಂದ ಈ ಒಂದು ಪ್ರತಿನಿಧಿ ಆಲಯದ ಶ್ರೀ ವೆಂಕಟೇಶ್ವರಸ್ವಾಮಿ ಆ ಕಾಲಕ್ಕೆ ಹೆಚ್ಚಿನ ಜನವನ್ನು ಆಕರ್ಷಿಸುತ್ತಿತ್ತು. 9 ನೆಯ ಶತಮಾನದ ಕೊನೆಗೆ ತಿರುಚಾನೂರು ಪ್ರಾಂತ ಇದ್ದಂತಹ ತೊಂಡಮಂಡಲವನ್ನು ಚೋಳರು ವಶಪಡಿಸಿಕೊಂಡರು. ಅವರು ಶೈವ ಧರ್ಮಾಭಿಮಾನಿಗಳಾಗಿದ್ದು ತಿರುಚಾನೂರಿನಲ್ಲಿ





ಶೈವ ಪ್ರಾಬಲ್ಯ ಹೆಚ್ಚಾಯಿತು ಎಂಬುದನ್ನು ನೋಡಬಹುದು.

ಊರಿನ ಪಶ್ಚಿಮ ಭಾಗದಲ್ಲಿ ಒಂದು ಶಿವದೇವಾಲಯವಾಗಿ ಅದನ್ನು ಪರಾಶರೇಶ್ವರ ಎಂದು ಕರೆಯಲಾಯಿತು. (ಈಗಿನ ಜೋಗಿಮಲ್ಲಾವರದಲ್ಲಿರುವ ಆಲಯ). 13 ನೆಯ ಶತಮಾನದಲ್ಲಿ ಚೋಳರ ಅವನತಿಯಾಗಿ ಸ್ಥಳೀಯ ಸಾಮಂತರು ಸ್ವತಂತ್ರರಾದರು. ಇವರಲ್ಲಿ ವೈಷ್ಣವಪರರಾದ ಯಾದವ ರಾಯರುಗಳು ಪ್ರಮುಖರಾದರು. ಅವರ ಪ್ರಾಬಲ್ಯದ ಕಾಲದಲ್ಲಿ ತಿರುಚಾನೂರಿನಲ್ಲಿ ಅಳಗಿಯ ಪೆರುಮಾಳ್ ಅಥವಾ ಕೃಷ್ಣದೇವರ ಆಲಯ ಉಂಟಾಯಿತು. ವಿಜಯನಗರದ ರಾಜರ ಕಾಲದಲ್ಲಿ ವೈಷ್ಣವ ಧರ್ಮ ಅತಿ ಹೆಚ್ಚಿನ ಆದರಕ್ಕೆ ಒಳಗಾಗಿ ತಿರುಚಾನೂರಿನಲ್ಲಿ 16 ನೆಯ ಶತಮಾನದಲ್ಲಿ ವರದರಾಜಸ್ವಾಮಿಯ ದೇವಾಲಯ ನಿರ್ಮಾಣವಾಯಿತು. ಈ ವೈಷ್ಣವ ಧರ್ಮಾಭಿಮಾನವೇ ಅತಿ ಎತ್ತರಕ್ಕೆ ಏರಿದಾಗ ನಂತರದ ಕಾಲದಲ್ಲಿ ತಿರುಚಾನೂರು ಗ್ರಾಮದಲ್ಲಿ ಪದ್ಮಾವತಿ ಅಮ್ಮನವರ ದೇವಾಲಯವು ನಿರ್ಮಾಣವಾಯಿತು.

ತಿರುಚಾನೂರಿನ ಐದು ಮುಖ್ಯ ಆಲಯಗಳಲ್ಲಿ ನಾಲ್ಕು ಆಲಯಗಳು ಇಂದು ಕಂಡುಬರುತ್ತವೆ. ಐದು ಆಲಯಗಳು ಎಂದರೆ ತಿರುವಿಳಂಕೋಯಿಲು, ಕೃಷ್ಣಸ್ವಾಮಿ ಆಲಯ, ಪರಾಶರೇಶ್ವರ ಆಲಯ, ವರದರಾಜ ಆಲಯ ಮತ್ತು ಪದ್ಮಾವತೀ ಆಲಯ.

**ತಿರುವಿಳಂ ಕೋಯಿಲ್ :** ತಿರುಚಾನೂರಿನ ಆಲಯಗಳಲ್ಲಿ ಅತಿ ಪ್ರಾಚೀನವಾದುದು ಈ ಆಲಯ. ಕ್ರಿ.ಶ. 826 ನೇ ವರ್ಷದಲ್ಲಿ ಪಲ್ಲವ ರಾಜ ಧಂತಿವರ್ಮನ ಆಳ್ವಿಕೆಯ 51 ನೇ ವರ್ಷದಲ್ಲಿ ಪ್ರಕಟವಾದ ಒಂದು ಶಾಸನವು ಈ ಆಲಯದ ಅತಿ ಪ್ರಾಚೀನ ಉಲ್ಲೇಖವಾಗಿದೆ. ಹಾಗಾಗಿ ಕ್ರಿ.ಶ. 9ನೇ ಶತಮಾನದ ಆರಂಭ ಕಾಲದಿಂದಲೂ ಈ ದೇವಸ್ಥಾನ ಇತ್ತು ಎಂದು ತೀರ್ಮಾನಿಸಬಹುದು. ಚೋಳರಾಜ 3ನೇ ರಾಜರಾಜನ ಆಡಳಿತ ಕಾಲದ ನಂತರ ಈ ದೇವಾಲಯದ ಉಲ್ಲೇಖ ಕಂಡು ಬರುವುದಿಲ್ಲ. ಹಾಗಾಗಿ 13 ನೇ ಶತಮಾನದ ನಂತರ ಈ ಆಲಯವು ಅವನತಿ ಹೊಂದಿರಬೇಕು ಎಂದು ಹೇಳಬಹುದು. ಈ ಆಲಯದ ಬಗ್ಗೆ 32 ಶಾಸನಗಳು ಇದ್ದು ಅವುಗಳಲ್ಲಿ ಹತ್ತು ಶಾಸನಗಳು, ಈ ಆಲಯವನ್ನು ನೇರವಾಗಿಯೇ ಹೆಸರಿಸುತ್ತವೆ. ಮಿಕ್ಕವು ಈ ಆಲಯಕ್ಕೇ ಸೇರಿದವು ಎನ್ನಬಹುದು. ಇವುಗಳಲ್ಲಿ 14 ಕಾಲದ ದಾಖಲೆಯಿಲ್ಲದ ಒಡಕು ಶಾಸನಗಳು ಎರಡು ಪಲ್ಲವರಾಜ ದಂತಿವರ್ಮನ ಕಾಲಕ್ಕೆ ಸೇರಿದಂತಹವು. ಒಂದು ಗಂಗ ಸಾಮಂತನನ್ನು ಹೆಸರಿಸುತ್ತದೆ. ಇನ್ನೊಂದು ಪಲ್ಲವ ಮುಖ್ಯನಾದ ಗುಣವದಪರಾಜಿತನನ್ನು ಹೆಸರಿಸುತ್ತದೆ. ಐದು ಶಾಸನಗಳು ಚೋಳರ ಕಾಲಕ್ಕೆ ಸೇರಿದವುಗಳಾದರೆ ಅವುಗಳಲ್ಲಿ ಒಂದು ಮೊದಲನೆಯ ಪರಾಂತಕನ ಆಡಳಿತದ 29 ನೇ ವರ್ಷಕ್ಕೆ (907-950) ಸೇರಿದ್ದು. ಇನ್ನೊಂದು ಆ ನಂತರದ ವರ್ಷದ್ದು. ಒಂದು ಮೊದಲನೇ ರಾಜರಾಜನ ಆಡಳಿತ ಕಾಲಕ್ಕೆ ಸೇರಿದರೆ ಇನ್ನೊಂದು ಮೂರನೇ ರಾಜರಾಜನ ಆಡಳಿತದ 5ನೇ ವರ್ಷಕ್ಕೆ ಸೇರುತ್ತದೆ. ಈ ತಿರುವಿಳಂ ಕೋಯಿಲು ತಿರುಮಲೆಯ ದೇವರು ಶ್ರೀ ವೆಂಕಟೇಶ್ವರಸ್ವಾಮಿಯ ತದ್ವತ್ ಮೂರ್ತಿಯನ್ನು ಹೊಂದಿದ್ದಿತು. ಮೊತ್ತ ಮೊದಲನೆಯ ಶಾಸನವು ಚೋಳನಾಡಿನ ಸೋಲನೂರ್‌ಗೆ ಸೇರಿದ ಉಲಗ ಪೆರುಮಾನಾರ್ ಎಂಬಾತನು ಆಲಯದಲ್ಲಿ ನಂದಾದೀಪವನ್ನು ಹಚ್ಚಿ ಇಡಲೆಂದು ದಾನವಾಗಿ ನೀಡಿದ 30 ಕಳಂಜು ಪ್ರಮಾಣದ ಚಿನ್ನವನ್ನು ದಾಖಲಿಸುತ್ತದೆ. ಎರಡನೆಯ ಶಾಸನವು ಸೀಯಕನ್ ಎಂಬಾತನು ಆಲಯದಲ್ಲಿ ದೀಪವನ್ನು ಬೆಳಗಲು ಶುದ್ಧ ಚಿನ್ನವನ್ನು ಕೊಟ್ಟಂತೆ ಹೇಳುತ್ತದೆ. ಬಾಣ ಪ್ರಮುಖ ವಿಜಯಾದಿತ್ಯನು ತಿರುವಿಳಂ ಕೋಯಿಲ್‌ನ ದೇವರಿಗೆ ತಿರುಮಂತ್ರ ಸಾಲೈ ದೇವರಿಗೆ ಹಾಗೂ ವೇಂಗಡದ ದೇವರಿಗೆ ಭೂಮಿಯನ್ನು, ಚಿನ್ನವನ್ನೂ ದಾನ ನೀಡಿ ದೇವರಿಗೆ ದೀಪ ನೈವೇದ್ಯಗಳ ಏರ್ಪಾಡು ಮಾಡಿದನು. ನಂತರದ ಪಲ್ಲವ ಪ್ರಮುಖ ಗುಣವಾನ್ ಅಪರಾಜಿತನ್ ಆಲಯದಲ್ಲಿ ಇಬ್ಬರು ಬ್ರಾಹ್ಮಣರಿಗೆ ಪ್ರಸಾದ ಸೌಕರ್ಯವನ್ನು ಏರ್ಪಡಿಸಿದನು. ಕ್ರಿ.ಶ. 890 ರ ಒಂದು ಶಾಸನವು ಆಲಯದ ನಿರ್ವಹಣೆಗೆಂದು ನೀಡಲಾದ ದೇವಾದಾಯದ ಗ್ರಾಮದ ಆದಾಯವನ್ನು ಇತರ ಕಾರಣಗಳಿಗಾಗಿ ಬಳಸಿದ್ದನ್ನು ದಾಖಲಿಸುತ್ತದೆ. ದೇವಾಲಯದ ಆದಾಯವು ಕಡಿಮೆಯಾಗಿ ಆಡಳಿತಕ್ಕೆ ತಕ್ಕ ಹಣ ಹೊಂದಾಣಿಕೆ ಆಗುತ್ತಿರಲಿಲ್ಲ ಎಂಬುದು ಸ್ಪಷ್ಟವಿದೆ. ಆಲಯ ಇತಿಹಾಸದಲ್ಲಿನ ಈ ಒಂದು ಕ್ಷೋಭೆಗೆ ಕಾರಣವನ್ನು ನಾವು ಕಂಡುಕೊಳ್ಳುವುದು ಕಷ್ಟವೇನಲ್ಲ. ಪಲ್ಲವರಾಜ ಅಪರಾಜಿತನ ಆಡಳಿತ ಅವನತಿ ಹೊಂದುತ್ತಿದ್ದಂತೆ ಅವನ ರಾಜ್ಯ ಛಿದ್ರ ವಿಚ್ಛಿದ್ರವಾಗತೊಡಗಿತು. ತೊಂಡಮಂಡಲವನ್ನು ಈ ಸಮಯಕ್ಕೆ ಚೋಳರಾಜ ಆದಿತ್ಯನು ಆಕ್ರಮಿಸಿ ಪಲ್ಲವರಾಜನನ್ನು ಸೋಲಿಸಿ ಈ ಭಾಗವನ್ನು ವಶಪಡಿಸಿಕೊಂಡನು. ಇದರಿಂದಾಗಿ ತಿರುವಿಳಂ ಕೋಯಿಲ್‌ಗೆ ಬರುವ ಯಾತ್ರಿಕರ ಸಂಖ್ಯೆ ಕಡಿಮೆಯಾಗುತ್ತ ಬಂದು ದೇವಸ್ಥಾನದ ಆದಾಯ ಬಿದ್ದುಹೋಗಿರಬೇಕು.

9 ನೇ ಶತಮಾನದ ಮೊದಲ ಭಾಗದ ಹೊತ್ತಿಗೆ ಶಾಂತಿ ಸಮಾಧಾನಗಳು ಹರಡಿ ಆಲಯವು ಮೊದಲಿನ ಹಿರಿಮೆಯನ್ನು ಪಡೆಯಿತು. 898 ನೆಯ ವರ್ಷದ ಕಷ್ಟಕಾಲದ ನಂತರ ಕ್ರಿ.ಶ. 927 ರಲ್ಲಿ ಒಂದನೆಯ ಪರಾಂತಕನ ಕಾಲದಲ್ಲಿ ಒಂದು ದೀಪಕ್ಕಾಗಿ ದಾನಮಾಡಿದ ಉಲ್ಲೇಖವಿದೆ. ಕ್ರಿ.ಶ. 936 ರಲ್ಲಿ ಮಲನಾಡಿನ ಕುಡಂಗೋಲೂರನ್ ಎಂಬಾತ ಆಲಯದಲ್ಲಿ ಒಂದು ನಂದಾದೀಪವನ್ನು ಹಚ್ಚಿ ಇಡಲು 40 ಕಳಂಜು ಚಿನ್ನವನ್ನು ದಾನಮಾಡಿದ. ಒಂದನೆಯ ರಾಜರಾಜನ ಕಾಲದಲ್ಲಿ ಚೋಳ ಸಾಮಂತನೊಬ್ಬ ಅರುಳಕ್ಕಿ ಅಲಿಯಾನ್ ರಾಜರಾಜ ಮುವೇಂದವೇಲನ್ ಎಂಬಾತ ಒಂದು ಕಾಣಿಕೆಯನ್ನು ನೀಡಿದ.

13 ನೆಯ ಶತಮಾನದ ಮಧ್ಯಭಾಗದಲ್ಲಿ ತೊಂಡಮಂಡಲದಲ್ಲಿ ಚೋಳ ಪ್ರಾಬಲ್ಯ

ಅವನತಿಗಿಳಿಯಿತು. ಜಟಾವರ್ಮ ಸುಂದರ ಪಾಂಡ್ಯನು ಈ ಪ್ರದೇಶವನ್ನು ಆಕ್ರಮಿಸಿ ಎಲ್ಲ ಚೋಳ ಸಾಮಂತರನ್ನೂ ಅಧೀನ ಪಡಿಸಿಕೊಂಡ. ಸಮಯದ ಅವಕಾಶವನ್ನು ಬಳಸಿಕೊಂಡ ಈ ಸಾಮಂತರೆಲ್ಲ ಸ್ವತಂತ್ರರಾಗಿಹೋದರು. ವಿಜಯನಗರದ ಸಂಗಮ ವಂಶದ ರಾಜರು 14 ನೆಯ ಶತಮಾನದಲ್ಲಿ ತಮ್ಮ ಅಧೀನಕ್ಕೆ ಈ ಸಾಮಂತರನ್ನೆಲ್ಲ ತೆಗೆದುಕೊಳ್ಳುವವರೆಗೂ ಇವರೆಲ್ಲ ಸ್ವತಂತ್ರರಾಗಿಯೇ ಇದ್ದರು. ಈ ಕಾಲಕ್ಕೆ ಸೇರಿದ ಹಲವು ಶಾಸನಗಳಿದ್ದು ಇವುಗಳಲ್ಲಿ ಬಹುತೇಕ ಕಾಲಸೂಚನೆಯಿಲ್ಲದ ರಾಜನ ಹೆಸರನ್ನೂ ಹೇಳದ ಶಾಸನಗಳಾಗಿವೆ. ಒಂದು ದಾಖಲೆಯು ದೇವರನ್ನು ಮೆರವಣಿಗೆಯಲ್ಲಿ ಕರೆದುಕೊಂಡು ಹೋಗುವುದರ ಬಗ್ಗೆ ಹೇಳಿದರೆ, ಇನ್ನೊಂದು ತಿರುವಿಳಂಕೋಯಿಲ್‌ನಲ್ಲಿ ಫಂಗುಣಿ ಉತ್ಸವ ನಡೆದುದನ್ನು ಹೇಳುತ್ತದೆ. ಮತ್ತೊಂದು ಶಾಸನವು ಯಾರೋ ಮೂವರು ಕೊಟ್ಟ ದಾನದಿಂದ ನಡೆದ ಉತ್ಸವವನ್ನು ವಿವರಿಸುತ್ತದೆ.

ಮಗದೊಂದು ಶಾಸನವು ಆಲಯದ ಆಡಳಿತ ನಡೆಸುತ್ತಿದ್ದವರ ಬಗ್ಗೆ ಹೇಳುತ್ತದೆ. ಒಂದು ಶಾಸನವು ಆಲಯದ ಗರ್ಭಗುಡಿಯನ್ನು ಉಲ್ಲೇಖಿಸಿದರೆ ಮತ್ತೊಂದು ಒಡಕು ಶಾಸನವು ಬ್ರಾಹ್ಮಣ ಭೋಜನವನ್ನು ಕುರಿತು ಹೇಳುತ್ತದೆ. ಇನ್ನೊಂದು ಒಡಕು ಶಾಸನವು ಆಲಯದ ಕೋಶಾಗಾರವನ್ನೂ, ನಾಗರೀಕರನ್ನೂ, ಆಲಯದ ಸೇವಕರನ್ನೂ ಹೆಸರಿಸುತ್ತದೆ. ಒಂದು ತುಂಡು ಶಾಸನವು 40 ಕಳಂಜು ಬಂಗಾರದ ದಾನವನ್ನು ಕುರಿತು ಹೇಳಿದರೆ, ಇನ್ನೊಂದು ತಿರುಪತಿಯ ಗೋವಿಂದರಾಜಸ್ವಾಮಿಯನ್ನು ಹೆಸರಿಸಿ ತಿರುವಿಳಂಕೋಯಿಲನ್ನು ಹೆಸರಿಸುತ್ತದೆ. ಒಂದು ಶಾಸನವು ದೇವರಿಗೆ ಹಚ್ಚುವ ಗಂಧದೆಣ್ಣೆಯನ್ನು ಕುರಿತು ಹೇಳುತ್ತದೆ.

ತಿರುಚಾನೂರಿನಲ್ಲಿ ಈ ತಿರುವಿಳಂ ಕೋಯಿಲನ್ನು ಇಂದು ಗುರುತಿಸುವುದು ಸಾಧ್ಯವಿಲ್ಲ. ಇಲ್ಲಿನ ಬಹುತೇಕ ಶಾಸನಗಳು ವಾಹನ ಮಂಟಪದಲ್ಲೂ ಪದ್ಮಾವತಿ ಅಮ್ಮನವರ ಆಲಯದ ಮಹಾದ್ವಾರ ಗೋಪುರದಲ್ಲೂ ಕಂಡುಬರುವುದರಿಂದಾಗಿ ಈ ಆಲಯವು ಈಗ ಪದ್ಮಾವತಿ ಅಮ್ಮನವರ ದೇವಾಲಯವಿರುವ ಆಲಯದ ಅಂಗಳದಲ್ಲಿ ಎಲ್ಲಿಯೋ ಇದ್ದಿರಬೇಕು. ಇದು ನಿರ್ಲಕ್ಷ್ಯಕ್ಕೆ ಗುರಿಯಾಗಿ ಜೀರ್ಣವಾಗಿರಬೇಕು. ಈಗ ಕಂಡುಬರುವ ಆಲಯದ ಅಂಗಳದಲ್ಲಿನ ಮೂರೂ ದೇವಾಲಯಗಳಲ್ಲಿ ಕಂಡುಬರುವಂತಹ ಬೇರೆ ಬೇರೆ ಗಾತ್ರದ, ಪಾತ್ರದ ಕಂಬಗಳೂ, ಶಿಲ್ಪಗಳೂ, ಶಿಲಾಪಟ್ಟಿಕೆಗಳೂ ವಿಭಿನ್ನ ಶೈಲಿಯ, ವಿಭಿನ್ನ ಕಾಲದ ಮಾದರಿಗಳನ್ನೂ ನೋಡಿದರೆ ಜೀರ್ಣವಾದ ಈ ಆಲಯದ ಎಲ್ಲ ವಸ್ತುಗಳನ್ನೂ ಪೂರ್ಣವಾಗಿ ಬಳಸಿಕೊಂಡು ಈಗ ಕಂಡುಬರುವ ಮೂರೂ ಆಲಯಗಳನ್ನು ಕಟ್ಟಿರಬೇಕೆಂಬ ನಂಬಿಕೆ ದೃಢವಾಗುತ್ತದೆ-

**ಅಳಗಿಯ ಪೆರುಮಾಳ್ ದೇವಾಲಯ :** ತಿರುಚಾನೂರು ಆಲಯದ ಪ್ರಾಂಗಣದಲ್ಲಿ ಕಂಡುಬರುವ ಮೂರು ಗುಡಿಗಳಲ್ಲಿ ಇದು ಅತಿ ಪ್ರಾಚೀನವಾದುದು. ತಿರುಪತಿಯ ಗೋವಿಂದರಾಜಸ್ವಾಮಿ ಗುಡಿಯ ಆಲಯ ಪ್ರಾಂಗಣದಲ್ಲಿ ಮಹಾದ್ವಾರ ಗೋಪುರಕ್ಕೆ ಎದುರಾಗಿ ಪಾರ್ಥಸಾರಥಿ ಆಲಯವಿರುವಂತೆ ಇಲ್ಲಿಯೂ ಮಹಾದ್ವಾರ ಗೋಪುರಕ್ಕೆ ಎದುರಾಗಿ ಈ ಗುಡಿ ಇದೆ. ಇದರ ಎರಡೂ ಬದಿಗಳಲ್ಲಿ ಇತರ ಎರಡು ಗುಡಿಗಳಿವೆ.

ಇಲ್ಲಿ ಪ್ರತಿಷ್ಠೆಯಾಗಿರುವ ಶ್ರೀಕೃಷ್ಣನ ಬಗ್ಗೆ ಹತ್ತು ಶಾಸನಗಳಿವೆ. ಇವುಗಳಲ್ಲಿ ಮೊದಲನೆಯದು ಕ್ರಿ.ಶ. 1221 ರಲ್ಲಿನ ರಾಜರಾಜ ಚೋಳನ ಆಳ್ವಿಕೆಯ ಐದನೇ ವರ್ಷಕ್ಕೆ ಸೇರಿದ್ದಾದರೆ ಅತಿ ಈಚಿನ ಶಾಸನ ಕ್ರಿ.ಶ. 1552ಕ್ಕೆ ಸೇರಿದ್ದು, ನಂತರದ ಕಾಲದಲ್ಲಿ ಎರಡು ತ್ರುಟಿತ ಶಾಸನಗಳು ಕಂಡುಬಂದಿವೆಯಾದರೂ ಅವುಗಳಿಗೆ ಕಾಲನಿರ್ದೇಶವಿಲ್ಲ.

ಕೃಷ್ಣಸ್ವಾಮಿಯ ಈ ಗುಡಿಯೂ ಮೇಲೆ ಹೇಳಿದಂತೆ 1221 ರಲ್ಲಿಯೇ ಇದ್ದಿರಬೇಕು. ದೇವಸ್ಥಾನದ ಮೂಲವನ್ನು 12ನೇ ಶತಮಾನದ ಮಧ್ಯಭಾಗದವರೆಗೆ ಹಿಂದಕ್ಕೆ ಎಳೆಯಬಹುದು. ಪೊಕ್ಕಿರಾನ್ ಎಂಬ ಭಕ್ತನೋರ್ವನು ತನ್ನ ಹಣಹಾಕಿ ಭೂಮಿಯನ್ನು ಸಮತಟ್ಟಾಗಿಸಿ ಬೇಸಾಯಕ್ಕೆ ಒದಗಿಸಿ ದೇವಸ್ಥಾನಕ್ಕೆ ನೀಡಿದಾಗ, ದೇವಸ್ಥಾನದ ಅರ್ಚಕರು ದಾನಿಯ ಹೆಸರಿನಲ್ಲಿ ದೇವರಿಗೆ





ಫಂಗುಣಿ ಉತ್ಸವವನ್ನು ಮಾಡಲು ಒಪ್ಪಿಕೊಂಡರಂತೆ. ವಿಜಯನಗರದ ರಾಜ ಸಾಳುವ ನರಸಿಂಹನು ಕ್ರಿ.ಶ. 1467 ರಲ್ಲಿ ತಿರುಪತಿಯ ಸ್ಥಾನತ್ತಾರ್ ರಲ್ಲಿ ಪ್ರಸಾದವನ್ನು ವಿತರಿಸಲು ಕಟ್ಟಳೆ ಮಾಡಿದನು. ಈ ಕಟ್ಟಳೆಯಂತೆ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಭಂಡಾರದಿಂದ ಎರಡು ತಳಿಗೆ ಬೆಣ್ಣೆಯನ್ನು ಇಲ್ಲಿನ ಅಳಗಿಯ ಪೆರುಮಾಳರಿಗೆ ನಿವೇದಿಸಲು ಅವಕಾಶವಾಯಿತು. ಇನ್ನೊಂದು ದಾಖಲೆಯು ಇದೇ ದೊರೆಯು ಮಾಡಿದ ಇನ್ನೊಂದು ಕಾಣಿಕೆಯನ್ನು ಗುರುತಿಸುತ್ತದೆ. ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಕೋಶಾಗಾರದ ಉಸ್ತುವಾರಿಯ ಕಂದಾಡೆ ರಾಮಾನುಜಅಯ್ಯಂಗಾರ್ಯನು ತಿರುಮಲೆ ತಿರುಪತಿಗಳಲ್ಲಿ ಇದ್ದ ರಾಮಾನುಜ ಕೂಟಗಳನ್ನು ನೋಡಿಕೊಳ್ಳುತ್ತಿದ್ದ. ಈತನು ತಿರುಮಲೆ ಆಲಯಕ್ಕೆ 8770 ನರ್ಪಣಗಳನ್ನು ಸಮರ್ಪಿಸಿ ಹಲವಾರು ದೇವರುಗಳಿಗೆ ನಿವೇದನೆಯ ಏರ್ಪಾಟು ಮಾಡಿದನು. ಅದರಂತೆ ಈ ದೇವರ ಉತ್ಸವದ ಮುಗಿತಾಯದ ದಿನ ಮೆರವಣಿಗೆಯಲ್ಲಿ ದೇವರು ಬಂದು ಒಂದು ಮಂಟಪದಲ್ಲಿ ವಿಶ್ರಾಂತಿ ಪಡೆಯುವಾಗ ದೋಸೆಯ ನಿವೇದನೆಯಾಗಬೇಕೆಂದು ಕಟ್ಟಳೆಯಾಯಿತು. ಅಚ್ಯುತರಾಯನ ಆಡಳಿತದ ಕಾಲದಲ್ಲಿ ಅಳಗಿಯ ಪೆರುಮಾಳರಿಗೆ ಆಡಿಮಾಸದಲ್ಲಿ ನಡೆಯುವ ಬ್ರಹ್ಮೋತ್ಸವದ ತೀರ್ಥವಾರಿಯ ದಿನ ಒಂದು ದೋಸೆ ಪಡಿಯ ನಿವೇದನೆಗಾಗಿ ಕ್ರಿ.ಶ. 1541 ರಲ್ಲಿ ಶೆಟ್ಟಲೂರು ಶ್ರೀನಿವಾಸಯ್ಯನ್ 2770 ನರ್ಪಣಗಳನ್ನು ನೀಡಿದನು. 1552 ರಲ್ಲಿ ರಾಮರಾಜ ಕೊಂಡರಾಜನು ಈ ದೇವರಿಗೆ ಪಡಿಯ ವೇಟ್ಟೆ ಉತ್ಸವ ಮಾಡುತ್ತ ಕಣುಕ್ಕು ಪಡಿ ನೈವೇದ್ಯವನ್ನು ಸಮರ್ಪಿಸಿದನು.

ಈ ಗುಡಿಯು ಒಂದು ಗರ್ಭಗೃಹ, ಅಂತರಾಳ ಮುಖಮಂಟಪಗಳನ್ನು ಹೊಂದಿದೆ. ಅಂತರಾಳದ ಒಂದು ಭಾಗವೇ ಮಹಾ ಮಂಟಪವಾಗಿ ಪರಿವರ್ತನೆಯಾಗಿದೆ. ಇದು ಪೂರ್ವಾಭಿಮುಖವಾದ ಗುಡಿ.

ಗುಡಿಯ ಅಧಿಷ್ಠಾನವು ತಗ್ಗಿನಲ್ಲಿದ್ದು, ಸರಳವಾಗಿದ್ದು ಐದು ಅಲಂಕಾರವಿಲ್ಲದ ಪಟ್ಟಿಕೆಗಳಿಂದ ಕೂಡಿದೆ. ಇದರ ಮೇಲಿನ ಗರ್ಭಗೃಹ ನಾಲ್ಕು ಸರಳ ಪಿಲಾಸ್ತರುಗಳಿಂದ ಕೂಡಿದ್ದು ಪ್ರಸ್ತಾರದಲ್ಲಿ ಭೂತಮಾಲಿಕೆ ಇದೆ. ಮೇಲಿನ ಕಾರ್ನಿಸು ಅಥವಾ ಕಪೋತಗಳು ನಾಲ್ಕು ನಾಸಿಕಗಳನ್ನು ಹೊಂದಿ ನಾಲ್ಕು ಕಡೆಯೂ ನರಶಿರವನ್ನು ಹೊಂದಿವೆ. ಮಕರಗಳನ್ನು ಹೊಂದಿದ ತಗ್ಗಾದ ಛಾವಣಿಯ ಮೇಲಿನ ವಿಮಾನವು ದ್ವಿತಾಳ ಹೊಂದಿದ್ದು ಎರಡು ಚೌಕದ ಮೆಟ್ಟಿಲನ್ನು ಹೊಂದಿದೆ. ಮೇಲಿನ ಮೆಟ್ಟಿಲಿನ ಮೇಲೆ ಸಿಂಹಾಲಂಕಾರವಿದೆ.



ಶಿಖರವು ವೇಸರ ಪದ್ಧತಿಯಲ್ಲಿದ್ದು ನಾಲ್ಕು ಕಡೆಯ ನಾಸಿಕಗಳು ಸಿಂಹಲಲಾಟವನ್ನು ಹೊಂದಿವೆ. ಮೇಲೆ ಚಿನ್ನದ ಮುಲಾಮು ಹಚ್ಚಿದ ಕಲಶ ಕಮಲದಲ್ಲಿದೆ. 20 ನೆಯ ಶತಮಾನದ ಆದಿಯಲ್ಲಿ ಈ ವಿಮಾನದ ಜೀರ್ಣೋದ್ಧಾರವಾಗಿದೆ.

ಗುಡಿಯ ಮುಂಭಾಗದಲ್ಲಿ ಬಯಲು ಮಂಟಪವನ್ನು ಹೊಂದಿ ಇಲ್ಲಿ ನಾಲ್ಕು ಕಂಬಗಳ ಮೂರು ಸಾಲು ಇದೆ. ಇವುಗಳಲ್ಲಿ ಮೊದಲ ಸಾಲಿನ ಎರಡೂ ಕೊನೆಗಳ ಕಂಬಗಳು ಚೋಳ ಶೈಲಿಯಲ್ಲಿದ್ದರೆ ಮಿಕ್ಕವು ವಿಜಯನಗರದ ಮೊದಲ ಕಾಲದ ಶೈಲಿಯಲ್ಲಿವೆ. ಮಧ್ಯದ ನಾಲ್ಕು ಕಂಬಗಳ ನಡುವಿನ ಜಾಗ ಚೌಕವಾಗಿ ಸ್ವಲ್ಪ ಉಬ್ಬಿದೆ. ಈ ಮಂಟಪದ ಹಿಂದೆ ನಾಲ್ಕು ಕಂಬಗಳ ಮತ್ತೆರಡು ಸಾಲು ಇದ್ದರೂ ಅವುಗಳ ಎರಡೂ ಕಡೆಯಲ್ಲೂ ಗೋಡೆಗಳನ್ನೆಬ್ಬಿಸಿ ಸೇರಿಸಿ ಒಂದು ಚಿಕ್ಕ ಅಂಗಳವನ್ನು ಉಂಟು ಮಾಡಲಾಗಿದೆ. ಇದನ್ನು ಈಗ ಸ್ನಪನ ಮಂಟಪದಂತೆ ಬಳಸಲಾಗುತ್ತಿದೆ. ಇದರ ಆಚೆಗೆ ಅಂತರಾಳವಿದೆ. ಗರ್ಭಗೃಹದಲ್ಲಿ ನಾಲ್ಕು ವಿಗ್ರಹಗಳಿವೆ. ಮುಖ್ಯ ಪ್ರತಿಮೆ ಕೃಷ್ಣಸ್ವಾಮಿಯದು. ಈತ ಪದ್ಮಾಸನದಲ್ಲಿ ಕುಳಿತು ಎರಡೂ ಹಸ್ತಗಳು ವರದ ಭಂಗಿಯಲ್ಲಿವೆ.

ಈ ವಿಗ್ರಹಕ್ಕೆ ಲಂಬಕೋನದಲ್ಲಿ ಇನ್ನೊಂದು ವಿಗ್ರಹವಿದ್ದು, ಇದನ್ನು ಬಲರಾಮ ವಿಗ್ರಹ ಎನ್ನಲಾಗಿದೆ. ಎಡಗಾಲನ್ನು ಮೇಲಕ್ಕೆತ್ತಿ ಮಡಚಿದ್ದಂತೆಯೂ ಎಡಗೈಯನ್ನು ಈ ಎಡ ಮೊಳಕಾಲಿನ ಮೇಲೆ ಇಟ್ಟುಕೊಂಡಂತೆಯೂ ಇದ್ದು ಬಲಗಾಲು ನೆಲಕ್ಕೆ ಇಳಿಬಿದ್ದಿವೆ. ಬಲಗೈ

ಬಲಗಾಲಿನ ಕಡೆಯೇ ಇಳಿದಿದೆ. ಇನ್ನೆರಡು ವಿಗ್ರಹಗಳೆಂದರೆ ಕಾಳಿಯ ಮರ್ದನ ಕೃಷ್ಣ ಹಾಗೂ ಲಕ್ಷ್ಮೀನರಸಿಂಹ.

ವರದರಾಜಸ್ವಾಮಿ ಆಲಯ : ಇದು ಅಳಗಿರಿಯ ಪೆರುಮಾಳ್ ಗುಡಿಯ ದಕ್ಷಿಣಕ್ಕೆ ಇದ್ದು ಈಗ ಸುಂದರರಾಜಸ್ವಾಮಿ ಗುಡಿಯೆಂದು ಕರೆಯಲ್ಪಡುತ್ತಿದೆ. ಈ ಗುಡಿಯ ದೇವರ ಉಲ್ಲೇಖ ಮೂರು ಶಾಸನಗಳಲ್ಲಿ ಕಂಡುಬರುತ್ತದೆ. ಅತಿ ಪ್ರಾಚೀನ ಕಾಲದ ಉಲ್ಲೇಖವೆಂದರೆ ಕ್ರಿ.ಶ. 1541 ರದ್ದಾಗಿದ್ದು ವರದರಾಜಸ್ವಾಮಿಯ ರಥೋತ್ಸವವನ್ನು ವಿವರಿಸುತ್ತದೆ. ಎರಡನೆಯದು ಈ ದೇವರ ಬ್ರಹ್ಮೋತ್ಸವವನ್ನು ಹೇಳುತ್ತ ಅದರ ಕೊನೆಯಲ್ಲಿ ಆಚರಿಸಲಾಗುತ್ತಿದ್ದ ಅತಿಥಿಗಳ ಬೀಳ್ಕೊಡುಗೆ ಸಮಾರಂಭವನ್ನು ವಿವರಿಸುವ 1547 ರ ಕಾಲದ್ದು. ಈ ಶಾಸನದಲ್ಲಿಯೇ ಯುಗಾದಿ, ದೀಪಾವಳಿ ತೆಪ್ಪೋತ್ಸವ ಅಧ್ಯಯನೋತ್ಸವಗಳನ್ನು ಕುರಿತೂ ಹೇಳಲಾಗಿದೆ. ಈ ಎರಡು ಶಾಸನಗಳಿಂದಲೂ ತಿಳಿದು ಬರುವ ಅಂಶವೆಂದರೆ 16 ನೇ ಶತಮಾನದ ಆರಂಭದಲ್ಲಿ ಈ ಗುಡಿ ಉಂಟಾಗಿದ್ದಿರಬೇಕು.

ಈ ಆಲಯದಲ್ಲಿ ಗರ್ಭಗೃಹ, ಅಂತರಾಳ, ಮುಖಮಂಟಪ ಮತ್ತು ಮಹಾಮಂಟಪಗಳು ಇವೆ. ಅಧಿಷ್ಠಾನವು ಎತ್ತರವಾಗಿದ್ದು ಅಲಂಕೃತವಾಗಿದೆ. ಉಪಾನದ ಮೇಲೆ ಮೂರು ಪಟ್ಟಿಕೆಗಳು-ಪದ್ಮಪಟ್ಟಿಕಾ, ತ್ರಿಪಟ್ಟಗಳಗಳಿದ್ದು ಕಪೋತಗಳು ನಾಸಿಕ ಹಾಗೂ ಆಲಿಂಗ ಪಟ್ಟಿಕೆಗಳಿಂದ ಕೂಡಿವೆ. ಇದರ ಹೊರ ಗೋಡೆಗಳು ಎರಡು ಪಿಲಾಸ್ತರುಗಳು ಕುಂಭಪಂಜರಗಳು ಮೊದಲಾದ ಅಲಂಕಾರ ಗಳಿಂದ ಕೂಡಿದೆ. ಅಂತರಾಳದ ಗೋಡೆಗಳು ಎರಡು ಪಿಲಾಸ್ತರುಗಳಿಂದ ಕೂಡಿದ್ದರೆ ಮುಖ ಮಂಟಪವು ಆರು ಪಿಲಾಸ್ತರುಗಳಿಂದ ಕೂಡಿದೆ.

ಗುಡಿಯ ಮುಂದಿರುವ ಮಹಾಮಂಟಪವು ನಾಲ್ಕು ಕಂಬಗಳ ಮೂರು ಸಾಲನ್ನು ಹೊಂದಿದ್ದು ಹಿಂಭಾಗದಲ್ಲಿ ಎರಡು ಕಂಬಗಳ ಒಂದು ಸಾಲು ಇದೆ.

ಎಲ್ಲ ಕಂಬಗಳು ವಿಜಯನಗರ ಶೈಲಿಯಲ್ಲಿವೆ ಇದರಾಚೆಗಿನ ಮುಖಮಂಟಪ ಸಾಧಾರಣ. ಅಂತರಾಳದ ಎರಡೂ ಕಡೆ ದ್ವಾರಪಾಲ ಕರಿದ್ದಾರೆ. ಗರ್ಭಗೃಹದ ಮುಂದಿನ ಗೋಡೆಯಲ್ಲಿ ಎರಡು ಪಿಲಾಸ್ತರುಗಳ ನಡುವೆ ಕುಂಭಪಂಜರವಿದೆ. ಗರ್ಭಗೃಹದ ಮಧ್ಯದಲ್ಲಿ ವರದರಾಜಸ್ವಾಮಿಯು ಸಮಭಂಗಿಯಲ್ಲಿ ಮೇಲಿನ ಎರಡು ಕೈಗಳಲ್ಲಿ ಶಂಖಚಕ್ರಗಳನ್ನು ಹಿಡಿದು ನಿಂತಿದ್ದಾನೆ. ಕೆಳಭಾಗದ ಬಲಗೈ ವರದಹಸ್ತವಾಗಿರುವುದರಿಂದ ಈತನನ್ನು ವರದರಾಜ ಎನ್ನುತ್ತಾರೆ. ಎಡಗೈ ನೀಳವಾಗಿ ಚಾಚಿದೆ. ಶ್ರೀದೇವಿ ಭೂದೇವಿಯರಿದ್ದಾರೆ.



ಪದ್ಮಾವತಿ ಆಲಯ : ಈ ಆಲಯ ಅಳಗಿಯ ಪೆರುಮಾಳ್ ಆಲಯದ ಉತ್ತರಕ್ಕೆ ಇದೆ. ತಿರುಚಾನೂರಿಗೆ ಆಗಮಿಸುವ ಯಾತ್ರಿಕರ ಆಕರ್ಷಣೆಯ ಕೇಂದ್ರ ಈ ಗುಡಿ. ಇಲ್ಲಿರುವ ಪದ್ಮಾವತಿದೇವಿ ಶ್ರೀ ವೆಂಕಟೇಶ್ವರಸ್ವಾಮಿಯ ಪತ್ನಿಯೆಂದು ವಿವರಿಸಲಾಗಿದೆ. ಈಕೆಯನ್ನು ಅಲಮೇಲ್ ಮಂಗನಾಚ್ಚಿಯಾರ್ ಎಂದು ತಪ್ಪಾಗಿ ಗುರುತಿಸಲಾಗಿದೆ. ಅಲಮೇಲ್ ಮಂಗ ನಾಚ್ಚಿಯಾರ್ ದೇವಿಯು ಶ್ರೀ ವೆಂಕಟೇಶ್ವರ ಸ್ವಾಮಿಯ ವಕ್ಷಃಸ್ಥಲದ ಬಲಭಾಗದಲ್ಲಿ ಅಲಂಕಾರವಾಗಿರುವ ದೇವರು. ತಿರುಮಲ - ತಿರುಪತಿ - ತಿರುಚಾನೂರುಗಳಲ್ಲಿ ದೊರೆತಿರುವ ಒಂದು ಸಾವಿರಕ್ಕೂ ಹೆಚ್ಚು ಶಾಸನಗಳಲ್ಲಿ ಒಂದು ಶಾಸನವೂ ಶ್ರೀ ಪದ್ಮಾವತಿದೇವಿ ಎಂಬ ದೇವತೆಯ ಹೆಸರನ್ನು ಎಲ್ಲೂ ಉಲ್ಲೇಖ ಮಾಡಿಲ್ಲ. ಈಚಿನ ಒಂದು ಶಾಸನವು ಶ್ರೀ ಶುಕಗ್ರಾಮದ ಅಥವಾ ತಿರುಚಾನೂರಿನ ಪದ್ಮತೀರ್ಥವನ್ನು ಕುರಿತು ಹೇಳಿದರೂ ಪದ್ಮಾವತಿ ದೇವಿಯ ಬಗ್ಗೆ ಮೌನವಹಿಸಿದೆ. ಆಲಯದ ವಾಸ್ತುಶಿಲ್ಪ ಅರ್ವಾಚೀನ ಕಾಲಕ್ಕೆ ಸೇರಿದುದು. ಈ ಪ್ರಾಂತದ ಶಾಸನಗಳು 17 ನೆಯ ಶತಮಾನದ ಪ್ರಥಮ ಭಾಗಕ್ಕೆ ಬರುತ್ತಿದ್ದಂತೆಯೇ ನಿಂತು ಹೋಗುತ್ತದೆ. ಹಾಗಾಗಿ ಈ ಗುಡಿಯನ್ನು 17 ನೆಯ ಶತಮಾನದ ಕೊನೆಯ ಭಾಗಕ್ಕೆ ಸೇರಿಸಬಹುದು.

ಈ ಗುಡಿಯು ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿಯ ಗುಡಿಯನ್ನು ಅನೇಕ ವಿಧದಲ್ಲಿ ಹೋಲುತ್ತದೆ. ಗರ್ಭಗುಡಿ, ಅಂತರಾಳಗಳಿದ್ದು ನಾಲ್ಕನೆಯ ಕಡೆ ಮುಖಮಂಟಪವನ್ನು ಹೊಂದಿದೆ. ಈ ಮುಖಮಂಟಪದ ಆಚೆಗೆ ತಗ್ಗಿನಲ್ಲಿ ಕಂಬಗಳಿಂದ ಕೂಡಿದ ಒಂದು ಬಯಲು ಮಂಟಪವಿದೆ. ಇನ್ನೂ ಪೂರ್ವಕ್ಕೆ ಕಲ್ಯಾಣಮಂಟಪವಿದ್ದು ಅದರ ನಡುವೆ ಒಂದು ಪುಟ್ಟ ಗುಡಿ ಇದೆ. ಗುಡಿಯ ಗೋಡೆಗಳು ಮುಂದಕ್ಕೆ ಮಂಟಪದಲ್ಲಿ ಕೊನೆಗೊಳ್ಳುತ್ತವೆ. ಛಾವಣಿ ಸಾಧಾರಣವಾಗಿದೆ. ಗರ್ಭಗೃಹದ ಮೇಲೆ ವಿಮಾನವಿದ್ದು ಸಾಲಕೂಟಗಳನ್ನು ಹೊಂದಿದ್ದು ನಾಲ್ಕು ಕಡೆ ಗ್ರೀವಗಳಲ್ಲಿ ಸಿಂಹಗಳನ್ನು ಹೊಂದಿವೆ. ಶಿಖರದಲ್ಲಿ ಬಂಗಾರದ ಮುಲಾಮಿನ ಕಲಶವಿದೆ.

ಮುಂಭಾಗದ ಬಯಲು ಮಂಟಪದಲ್ಲಿ ವಿಜಯನಗರ ಶೈಲಿಯ ಆರು ಕಂಬಗಳ ಆರು ಸಾಲು ಕಂಡುಬರುತ್ತದೆ. ಇಲ್ಲಿಯೇ ಬಂಗಾರದ ಮುಲಾಮಿನ ಧ್ವಜಸ್ತಂಭ ಮತ್ತು ಬಲಿಪೀಠಗಳಿವೆ. ಇದರಾಚೆಗೆ ಮತ್ತೊಂದು ಎತ್ತರದ ಜಗುಲಿಯ ಮೇಲಿನ ಮಂಟಪವಿದ್ದು ಉತ್ತರದಕ್ಷಿಣಗಳಲ್ಲಿ ಗೋಡೆಗಳಿಂದ ಕೂಡಿದ ಮಂಟಪವಿದೆ. ಇಲ್ಲಿನ ನಾಲ್ಕು ಕಂಬಗಳ ಎರಡು ಸಾಲು ಚೋಳರ ಕಾಲದವು. ಮಧ್ಯದ ನಾಲ್ಕು ಕಂಬಗಳ ನಡುವೆ ಚೌಕದ ನೆಲ ಎತ್ತರವಾಗಿದೆ.



# ಶ್ರೀ ಪದ್ಮಾವತೀ ದೇವಿ ಬ್ರಹ್ಮೋತ್ಸವ - 2002

ಶ್ರೀ ಪದ್ಮಾವತೀ ಅಮ್ಮನವರ ಆಲಯವು ಹೊಸ ನಿರ್ಮಾಣವೇ ಆಗಿದ್ದರೂ ಪದ್ಮಾವತೀ ಅಮ್ಮನವರ ಐತಿಹ್ಯ ಪ್ರಾಚೀನತೆಯನ್ನು ಪಡೆದಿರುವುದೇ ಆಗಿದೆ. ಇಲ್ಲಿನ ಆಲಯದ ಬದಿಯ ಪದ್ಮ ಸರೋವರದಲ್ಲಿಯೇ ತಾಯಿ ಆವಿರ್ಭವಿಸಿದರೆಂದು ಪರಂಪರೆ. ಅದಕ್ಕಾಗಿಯೇ ಇಲ್ಲಿ - ಈ ಸರೋವರದಲ್ಲಿ ನಡೆಯುವ ಪದ್ಮಾವತೀ ಅಮ್ಮನವರ ತೆಪ್ಪೋತ್ಸವ, ಪಂಚಮೀ ತೀರ್ಥಗಳು ಅತಿ ಹೆಚ್ಚು ಜನವನ್ನು ಸೆಳೆಯುತ್ತವೆ. ಕಾರ್ತೀಕ ಮಾಸದ ಪಂಚಮಿಯಂದು ಚಕ್ರಸ್ನಾನವಾಗುವ ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ ಆ ಕಾರಣದಿಂದಾಗಿಯೇ ಅತಿ ಸಂಭ್ರಮದಿಂದ ಆಚರಿಸಲ್ಪಡುತ್ತದೆ. ಈ ಬಾರಿ ನವಂಬರ್ 30 ರಿಂದ ಡಿಸೆಂಬರ್ 8 ರ ವರೆಗೆ ಬ್ರಹ್ಮೋತ್ಸವಗಳು ನಡೆಯುತ್ತವೆ. ದಿನಕ್ಕೆ ಎರಡು ಬಾರಿ ಅಮ್ಮನವರನ್ನು ಬೇರೆ ಬೇರೆ ವಾಹನಗಳಲ್ಲಿ ಊರ ಮೆರವಣಿಗೆಯಲ್ಲಿ ಕರೆತರಲಾಗುತ್ತದೆ. ದಿನವೂ ಸಂಜೆ ಊಂಜಲ್ ಸೇವೆಯಾಗುತ್ತದೆ. ಪಂಚಮೀ ತೀರ್ಥದ ದಿನ ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಿಂದ ಅಮ್ಮನವರ ತೀರ್ಥವಾರಿಗೆಂದು ರೇಷ್ಮೆ ವಸ್ತ್ರಗಳು, ಹರಿದ್ರಾಕುಂಕುಮ, ಮೊದಲಾದವುಗಳ ಆನೆಯ ಮೇಲೆ ಮೆರವಣಿಗೆಯಲ್ಲಿ ತಂದು ಒಪ್ಪಿಸಲಾಗುತ್ತದೆ. ಇದೊಂದು ಹೊಸರೀತಿಯ ವೈಭವವಾಗಿ ಈ ಪಂಚಮೀ ತೀರ್ಥ ಅತಿ ಹೆಚ್ಚಿನ ಜನಾಕರ್ಷಕ ದಿನವಾಗಿ ಬೆಳಗುತ್ತದೆ.

ಅಮ್ಮನವರ ಆಲಯದಲ್ಲಿ ಬ್ರಹ್ಮೋತ್ಸವದ ಹಿಂದಿನ ದಿನ ಕುಂಕುಮಾರ್ಚನೆಯೂ ನಡೆಯುತ್ತದೆ. ಭಕ್ತರು ಬಹು ಸಂಖ್ಯೆಯಲ್ಲಿ ಭಾಗವಹಿಸುವ ಪೂಜೆ ಇದು. ಸರಸ್ವತಿಯಾಗಿ, ಪಾರ್ವತಿಯಾಗಿ, ಲಕ್ಷ್ಮಿಯಾಗಿ ವಿವಿಧ ವೇಷಾಲಂಕಾರಗಳಲ್ಲಿ ಕಂಡುಬರುವ - ಮೆರವಣಿಗೆಯಲ್ಲಿ ಬಂದು ಭಕ್ತರನ್ನು ಅನುಗ್ರಹಿಸುವ ತಾಯಿಗೆ ಈ ಬಾರಿ ಡಿಸೆಂಬರ್ 4 ರಂದು ಸಂಜೆ ಗಜವಾಹನವೂ, ಡಿಸೆಂಬರ್ 5 ರಂದು ಸಂಜೆ ಗರುಡವಾಹನವೂ ಡಿಸೆಂಬರ್ 7 ರಂದು ರಥೋತ್ಸವವೂ ನಡೆಯುತ್ತವೆ. ಚಕ್ರಸ್ನಾನವಾಗುವುದು (ಪಂಚಮೀತೀರ್ಥ) ಡಿಸೆಂಬರ್ 8 ರಂದು. (ಉತ್ಸವ ವಿವರಗಳಿಗಾಗಿ ಎರಡನೇ ಪುಟವನ್ನು ಗಮನಿಸಿ.)

ಯಾತ್ರಿಕರ ಭಕ್ತರ ಸೌಕರ್ಯಕ್ಕಾಗಿ ತಿರುಚಾನೂರಿನ ಆಸ್ಥಾನ ಮಂಟಪದಲ್ಲಿ ವಿವಿಧ ರೀತಿಯ ಧಾರ್ಮಿಕ ಕಾರ್ಯಕ್ರಮಗಳು ಏರ್ಪಾಡಾಗಿರುತ್ತವೆ. ಇಲ್ಲಿ ಫಲಪುಷ್ಪ ಪ್ರದರ್ಶನ ಔಷಧೀ ಮೂಲಿಕಾ ಪ್ರದರ್ಶನಗಳೂ ಏರ್ಪಾಡಾಗುವುದು. ಪುಸ್ತಕ ಪ್ರದರ್ಶನ ಮಾರಾಟಗಳಿರುವುವು.

ತಿರುಚಾನೂರಿಗೆ ತಿರುಪತಿಯಿಂದ ಒಂದರ ಹಿಂದೆ ಒಂದರಂತೆ ಬಸ್ ಸೌಲಭ್ಯವುಂಟು.

ಇದರಾಚೆಗ ಮುಖಮಂಟಪ ಇದೆ. ಇಲ್ಲಿ ಉತ್ತರ ದಕ್ಷಿಣಕ್ಕೆ ಎರಡು ಸಣ್ಣ ಕೋಣೆಗಳಿವೆ. ಉತ್ತರದ ಕೋಣೆಯಲ್ಲಿ ರಾಮಾನುಜರು ದಕ್ಷಿಣದ ಕೋಣೆಯಲ್ಲಿ ಗರುಡ ಹಾಗೂ ವಿಷ್ವಕ್ಸೇನರು ಇದ್ದಾರೆ. ಮುಖಮಂಟಪವು ಅಂತರಾಳಕ್ಕೆ ತೆರೆದುಕೊಳ್ಳುತ್ತದೆ. ತಿರುಪತಿಯ ಗೋವಿಂದರಾಜಸ್ವಾಮಿಯ ದೇವಾಲಯದಂತೆಯೇ ಕಂಬಗಳ ಹಾದಿ ಇದೆ. ಇಲ್ಲಿನ ಕಂಬಗಳು ಕೆಲವು ಚೋಳರ ಕಾಲದ ಬೋದಿಗೆಗಳನ್ನು ಹೊಂದಿದ್ದರೆ, ಕೆಲವು ವಿಜಯನಗರ ಕಾಲದ ಕಂಬಗಳಾಗಿವೆ. ಇಲ್ಲಿನ ಅಂತರಾಳ ಗರ್ಭಗೃಹಗಳ ನಡುವ ಮೂರು ಅಡಿಯ ಸಣ್ಣಸ್ಥಳ ಮೊದಲಿಗೆ ಆಕಾಶಕ್ಕೆ ತೆರೆದುಕೊಳ್ಳುವಂತೆ ಇದ್ದು ನಂತರ ಕಲ್ಲು ಚಪ್ಪಡಿಗಳಿಂದ ಮುಚ್ಚಲ್ಪಟ್ಟಿರಬೇಕು.

ಗರ್ಭಗೃಹದ ಹೊರ ಗೋಡೆಗಳು ಪಿಲಾಸ್ತರುಗಳಿಂದಲೂ ಸಾಲಕೋಷ್ಠಗಳಿಂದಲೂ ಕೂಡಿದ್ದರೆ ಅಂತರಾಳದ ಗೋಡೆಗಳು ಹಾಗೆಯೇ ಇವೆ. ಗರ್ಭಗೃಹದ ಬಾಗಿಲಿನಲ್ಲಿ ದ್ವಾರಪಾಲಕರಿದ್ದಾರೆ. ಗರ್ಭಗೃಹದಲ್ಲಿ ಸುಂದರವಾದ ಪದ್ಮಾವತೀ ದೇವಿಯ ಮೂರ್ತಿ ಇದೆ. ಪದ್ಮಾಸನದಲ್ಲಿ ಕುಳಿತ ಭಂಗಿಯ ಅಮ್ಮನವರು ಮೇಲಿನ ಎರಡೂ ಕೈಗಳಲ್ಲಿ ಕಮಲದ ಹೂಗಳನ್ನು ಹಿಡಿದಿದ್ದರೆ ಕೆಳಗಣ ಕೈಗಳು ಅಭಯ ವರದ ಮುದ್ರೆಗಳಲ್ಲಿ ಇವೆ.

(ಅತ್ಯಂತ ಆಕರ್ಷಕವಾದ ಶ್ರೀ ಪದ್ಮಾವತೀ ಅಮ್ಮನವರ ವಿಗ್ರಹ ಭಕ್ತರನ್ನು ಸೂಜಿಗಲ್ಲಿನಂತೆ ಸೆಳೆಯುತ್ತದೆ. ವಾತ್ಸಲ್ಯ ಸೌಂದರ್ಯ ಮೂರ್ತಿಭವಿಸುವುದಾದರೆ ಅದು ಇಲ್ಲಿ ಎಂದು ಹೇಳಬಹುದು. ಅದು ಭಕ್ತರ ಚಕ್ಷು ಚರ್ಮಗಳ ಮೂಲಕ ಅನುಭವಕ್ಕೆ ಬರುವ ಅಂಶವೆಂದು ಹೇಳಲಾಗಿದೆ. ಅಂತಹ ಆನಂದಮಯತೆ ಅಮ್ಮನವರ ಮುಖ ಮಂಡಲದಿಂದ ಹೊರಹೊಮ್ಮುವುದು. ಹಾಗಾಗಿಯೇ ದಿನೇ ದಿನೇ ತಿರುಚಾನೂರಿಗೆ ಭಕ್ತರ ಸಂಖ್ಯೆ ಬೆಳೆಯುತ್ತಿದೆ.)

★★★★★



# ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ - ತಿರುಚಾನೂರು

# ಆರ್ಜಿತ ಸೇವೆಗಳು - ಉತ್ಸವಗಳು



| ಸೇವೆಗಳು | ದಿನ/ಕಾಲ | ಪ್ರವೇಶಾವಕಾಶ | ಶುಲ್ಕ |
|---|---|---|---|
| **ದೈನಂದಿನ ಸೇವೆಗಳು** | | | |
| ಸುಪ್ರಭಾತ | ಪ್ರಾ - 5-00 ಗಂ॥ | 1 | ರೂ. 10-00 |
| | ಶುಕ್ರವಾರ ಪ್ರಾ - 4-00 ಗಂ॥ | 1 | ರೂ. 10-00 |
| ಸಹಸ್ರನಾಮಾರ್ಚನೆ | ಪ್ರಾ - 5-30 ಗಂ॥ | 1 | ರೂ. 10-00 |
| | ಶುಕ್ರವಾರ ಪ್ರಾ - 4-30 ಗಂ॥ | 1 | ರೂ. 10-00 |
| ಪದ್ಮಾವತೀ ಪರಿಣಯ (ಕಲ್ಯಾಣೋತ್ಸವ) | ಪ್ರಾ - 10-30 ಗಂ॥ | 5 | ರೂ. 500-00 |
| ಊಂಜಲ್ ಸೇವೆ | ಸಂ॥ 5-00 ಗಂ॥ | 2 | ರೂ. 116-00 |
| (ಡೋಲೋತ್ಸವ) | ಶುಕ್ರವಾರ ಸಂ॥ 6-00 ಗಂ॥ | 2 | ರೂ. 116-00 |
| ಏಕಾಂತ ಸೇವೆ | ರಾತ್ರಿ 9-00 ಗಂ॥ | 1 | ರೂ. 10-00 |
| ಕುಂಕುಮಾರ್ಚನೆ | ಸರ್ವದರ್ಶನ ಸಮಯದಲ್ಲಿ | 2 | ರೂ. 200-00 |
| **ವಾಹನಸೇವೆಗಳು** | | | |
| ಗಜವಾಹನ | ಕಲ್ಯಾಣೋತ್ಸವದ ನಂತರ | 1 | ರೂ. 100-00 |
| ಗರುಡವಾಹನ | ಕಲ್ಯಾಣೋತ್ಸವದ ನಂತರ | 1 | ರೂ. 100-00 |
| ವಿಶೇಷ ಪ್ರವೇಶ | ಸರ್ವದರ್ಶನ ಸಮಯದಲ್ಲಿ | 1 | ರೂ. 10-00 |
| ಶೀಘ್ರ ದರ್ಶನ | ಸರ್ವದರ್ಶನ ಸಮಯದಲ್ಲಿ | 1 | ರೂ. 20-00 |
| **ವಾರ ಸೇವೆಗಳು** | | | |
| ಅಷ್ಟದಳಪಾದ ಪದ್ಮಾರಾಧನೆ | ಸೋಮವಾರ ಪ್ರಾ॥ 6-30 ಗಂ॥ | 5 | ರೂ. 1500-00 |
| (ಮೂಲವರಿಗೆ) (ಬಹುಮಾನ - 10 ಗ್ರಾಂನ ಬೆಳ್ಳಿಯ ಪದಕ - ಉತ್ತರೀಯ, ಕುಪ್ಪುಸದ ಕಣ) | | | |
| ತಿರುಪ್ಪಾವಡಾ | ಗುರುವಾರ ಪ್ರಾ॥ 7-00 ಗಂ॥ | 5 | ರೂ. 3000-00 |
| ಬಹುಮಾನ - ಒಂದು ಉತ್ತರೀಯ, ಕುಪ್ಪುಸದ ಕಣ, 20 ಲಾಡು, 20 ವಡೆ, 20 ಅಪ್ಪ, 20 ದೋಸೆ. | | | |
| ಅಭಿಷೇಕ (ಮೂಲವರಿಗೆ) | ಶುಕ್ರವಾರ ಪ್ರಾ॥ 6-00 ಗಂ॥ | 1 | ರೂ. 200-00 |
| ಶ್ರೀ ಲಕ್ಷ್ಮಿಪೂಜೆ | ಶುಕ್ರವಾರ ಪ್ರಾ॥ 9-00 ಗಂ॥ (ಬಹುಮಾನ - ಕುಪ್ಪುಸದ ಕಣ) | 1 | ರೂ. 116-00 |
| **ಶಾಶ್ವತ ಸೇವೆಗಳು :** | | | |
| ಶಾಶ್ವತ ನಿತ್ಯ ಅರ್ಚನೆ | | | ರೂ. 1650-00 |
| ಶಾಶ್ವತ ಊಂಜಲ್ ಸೇವೆ | | | ರೂ. 1116-00 |

ಶಾಶ್ವತ ಸೇವೆ ಮಾಡಿಸುವ ಗೃಹಸ್ಥರಿಗೆ ಅವರ ಪೂರ್ಣ ಜೀವಮಾನ ಕಾಲದಲ್ಲಿ ವರ್ಷಕ್ಕೆ ಒಮ್ಮೆ ಸೇವೆಯನ್ನು ದರ್ಶಿಸುವ ಅವಕಾಶ ನೀಡಲಾಗುವುದು

**ಪ್ರಸಾದ ನಿವೇದನೆಗಳು :**

| | | |
|---|---|---|
| ದಧ್ಯೋದನ | ರೂ. | 250-00 |
| ಪುಳಿಯೋಗರೆ | ರೂ. | 275-00 |
| ಪೊಂಗಲ್ | ರೂ. | 325-00 |
| ಸಕ್ಕರೆ ಪೊಂಗಲ್ | ರೂ. | 375-00 |
| ಶಾಕರ ಬಾತ್ | ರೂ. | 400-00 |
| ಸೀರಾ | ರೂ. | 675-00 |
| ದೋಸೆ | ರೂ. | 200-00 |

**ಸೂಚನೆ :**

ಕಲ್ಯಾಣೋತ್ಸವ, ಊಂಜಲ್‌ಸೇವೆ - ಮತ್ತಿತರ ವಾರಸೇವೆಗಳಿಗೆ ಸೇವಾ ಟಿಕೆಟ್‌ಗಳು ಲಭ್ಯವಿರುವಂತೆ ಅಡ್ವಾನ್ಸ್ ರಿಸರ್ವೇಷನ್ ಅವಕಾಶವಿದೆ. ತಿರುಪ್ಪಾವಡ ಮತ್ತಿತರ ಪ್ರಸಾದ ನಿವೇದನೆಗಳಿಗೆ ಕನಿಷ್ಟ ಒಂದು ದಿನ ಮೊದಲಿಗೇ ಶುಲ್ಕ ನೀಡಬೇಕು. ಮೇಲಿನ ಸೇವಾ ಕಾಲಗಳಲ್ಲಿ ತುಸು ವ್ಯತ್ಯಾಸವಾಗಬಹುದು.

## ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ - ನಿತ್ಯ ಅನ್ನಪ್ರಸಾದ –ಯೋಜನೆ

ತಿರುಚಾನೂರು ಆಲಯವನ್ನು ಸಂದರ್ಶಿಸುವ ಯಾತ್ರಿಕರಿಗೆ ನಿರಂತರವಾಗಿ ದೇವರ ಪ್ರಸಾದ ವಿತರಣೆಯ ಉದ್ದೇಶದಿಂದ ಈ ಯೋಜನೆಯು ಆರಂಭವಾಗಿದೆ.

ಈ ಯೋಜನೆಗೆ ಕನಿಷ್ಟ ಪಕ್ಷ ರೂ. 1000-00 ನೀಡಬಹುದು. ರೂ. 1000-00 ಹಾಗೂ ಅದರ ಗುಣಕಗಳಲ್ಲಿ ಹಣವನ್ನು - ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇ., ತಿರುಪತಿ - ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು ಎ.ಇ.ಓ. ಶ್ರೀ ತಿರುಚಾನೂರು ಆಲಯ, ತಿರುಚಾನೂರು - ಎ.ಪಿ. ಇವರಿಗೆ ಕಳುಹಿಸಬೇಕು.

## ಭಕ್ತರಲ್ಲಿ ಒಂದು ವಿನಂತಿ

## ಶ್ರೀ ಪದ್ಮಾವತೀ ಅಮ್ಮನವರ ವಿಮಾನ ಗೋಪುರದ ಚಿನ್ನದ ಮುಲಾಮೀಕರಣ

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ಆಲಯದ ವಿಮಾನ ಗೋಪುರವನ್ನೂ ಪ್ರಾಕಾರದೊಳಗಿನ ಗೋಡೆಗಳನ್ನೂ ಆರು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಚಿನ್ನದ ಮುಲಾಮುಗೊಳಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

ಈ ಒಂದು ಘನವಾದ ಕೈಂಕರ್ಯದಲ್ಲಿ ಪಾಲು ಪಡೆಯ ಬಯಸುವ ಭಕ್ತಾದಿಗಳು ತಮ್ಮ ವಂತಿಗೆಯನ್ನು - **ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ** - ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯನ್ನು - ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್, ಶ್ರೀ ಪದ್ಮಾವತೀ ಅಮ್ಮನವರ ಆಲಯ, ತಿರುಚಾನೂರು - ಇವರಿಗೆ ಕಳುಹಿಸಿಕೊಡಬೇಕೆಂದು ವಿನಂತಿಸಲಾಗಿದೆ.

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇ., ತಿರುಪತಿ.

# ನಿಮ್ಮ ಪ್ರಶ್ನೆ? - ತಿ. ತಿ. ದೇವಸ್ಥಾನಗಳ ಉತ್ತರ !

ಪ್ರತಿ ಶುಕ್ರವಾರ ಬೆಳಗ್ಗೆ ಡಯಲ್ ಯುವರ್ ಇ.ಓ. ಕಾರ್ಯಕ್ರಮದಲ್ಲಿ ದೇಶದ ನಾನಾ ಮೂಲೆಗಳಿಂದ ಭಕ್ತರು ಕೇಳುವ ಪ್ರಶ್ನೆಗಳಿಗೆ ತಿರುಮಲ - ತಿರುಪತಿ ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ನೀಡುವ ಉತ್ತರಗಳಲ್ಲಿ ಕೆಲವನ್ನು ಆಯ್ದು ಕೆಳಗೆ ನೀಡಲಾಗಿದೆ. ಇಂತಹದೇ ಸಂದೇಹ ಬಂದ ಇತರರಿಗೂ ಇದು ಉತ್ತರವಾದೀತು ಇದರಿಂದ ಸಮಾಧಾನವಾದೀತು ಎಂಬುದು ಇಲ್ಲಿನ ಉದ್ದೇಶ. ಪ್ರತಿ ಶುಕ್ರವಾರ ಬೆಳಗ್ಗೆ 8.30 ರಿಂದ 9 ರ ವರೆಗೆ ನೀವೂ ಸಹ ಫೋನ್ ಮೂಲಕ ನೇರವಾಗಿ ಕಾರ್ಯನಿರ್ವಹಣಾಧಿಕಾರಿಗಳೊಡನೆ ಮಾತನಾಡಬಹುದು.

**ದೂರವಾಣಿ ಸಂಖ್ಯೆ - 08574 - 77261.**

ಸ್ವಾಮಿ ಸೇವೆಯಲ್ಲಿನ ರಿಸರ್ವೇಷನ್ ಕಾಲವನ್ನು ಮೂರು ತಿಂಗಳಿನಿಂದ ಒಂದು ತಿಂಗಳಿಗೆ ಇಳಿಸಿದರೆ ಎಲ್ಲರಿಗೂ ಸುಲಭವಾಗಿರುತ್ತದೆ. ಜೊತೆಗೇ ತಿರುಪತಿಯ ರೈಲ್ವೆ ಸ್ಟೇಷನ್‌ನಲ್ಲಿ ಸುದರ್ಶನ ಟೋಕನ್ ನೀಡುವ ವ್ಯವಸ್ಥೆ ಮಾಡಿದರೆ ಅನುಕೂಲವಾಗಿರುತ್ತದೆ.

**ಸ್ವಾಮಿ ಸೇವೆಗಳ ರಿಸರ್ವೇಷನ್ ಮೂರು ತಿಂಗಳಿಗಿಂತ ಹೆಚ್ಚಿನ ಕಾಲ ತೆಗೆದುಕೊಳ್ಳುತ್ತದೆ. ಹಾಗಾಗಿ ಆ ಕಾಲ ವ್ಯವಧಿಯನ್ನು ತಗ್ಗಿಸುವುದು ಸಾಧ್ಯವಾಗದ ವಿಷಯ. ತಿರುಪತಿ ರೈಲ್ವೆ ಸ್ಟೇಷನ್ ಎದುರಿಗಿರುವ ತಿ.ತಿ.ದೇ. ಮೊದಲ ಸತ್ರದಲ್ಲಿ ಸುದರ್ಶನ ಟೋಕನ್ ಕೌಂಟರ್ ಇದೆ.**

ತಿರುಮಲೆಯ ಜನತಾ ಹೋಟಲುಗಳಲ್ಲಿ ನಿರ್ಣಯಿಸಿದ ದರಗಳಿಗಿಂತ ಹೆಚ್ಚು ವಸೂಲಿ ಮಾಡುತ್ತಿದ್ದಾರೆ. ತಿರುಮಲೆಯಲ್ಲಿ ಹತ್ತು ರೂಪಾಯಿಗಳಿಗೆ ಭೋಜನದ ಏರ್ಪಾಡು ಇದ್ದರೆ ಯಾತ್ರಿಕರಿಗೆ ಅನುಕೂಲ.

**ನಿರ್ಣಯಿಸಿದ ದರಗಳಲ್ಲಿಯೇ ಈ ಹೋಟಲುಗಳಲ್ಲಿ ಆಹಾರ ಪದಾರ್ಥಗಳು ಮಾರಾಟಮಾಡಲು ತಕ್ಕ ಕ್ರಮಗಳನ್ನು ಕೂಡಲೇ ಕೈಗೆತ್ತಿಕೊಳ್ಳಲಾಗುತ್ತದೆ. ತಿರುಮಲೆಯ ಎಸ್.ವಿ. ಕ್ಯಾಂಟೀನಿನಲ್ಲಿ ಹತ್ತು ರೂಪಾಯಿಗಳಿಗೇ ಸಂತುಲಿತ ಭೋಜನ ದೊರೆಯುತ್ತಿದೆ.**

ಸ್ವಾಮಿಯ ಕಲ್ಯಾಣೋತ್ಸವಂ ಟಿಕೆಟ್ ಪಡೆದುಕೊಂಡವರಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಿದರೆ ಸೌಕರ್ಯವಾಗುತ್ತದೆ.

**ಸ್ವಾಮಿಯ ಆರ್ಜಿತ ಕಲ್ಯಾಣೋತ್ಸವವನ್ನು ಮಾಡಿಸುವ ಗೃಹಸ್ಥರು ತಿರುಮಲೆಯ ಕೇದ್ರ ಸ್ವಾಗತ ಕಚೇರಿಯಲ್ಲಿರುವ ಎ.ಆರ್.ಪಿ. ಕೌಂಟರಿನಲ್ಲಿ ವಿಚಾರಿಸಿ, ಸಂಬಂಧಪಟ್ಟ ಟಿಕೆಟನ್ನು ತೋರಿಸಿದರೆ ವಸತಿ ಏರ್ಪಾಡು ಮಾಡಲಾಗುತ್ತದೆ. ಅದಕ್ಕೆ ತಕ್ಕ ಶುಲ್ಕವನ್ನು ನೀಡಬೇಕಾಗುತ್ತದೆ.**

ತಿರುಪತಿ - ತಿರುಮಲೆಗಳ ಮಧ್ಯೆ ಹಾಗೂ ತಿರುಮಲೆಯಲ್ಲಿ ಪರಿಮಿತಿಯನ್ನು ಮೀರಿ ಅಧಿಕ ಸಂಖ್ಯೆಯ ಯಾತ್ರಿಕರನ್ನು ರವಾನೆ ಮಾಡುತ್ತಿದ್ದಾರೆ. ಇದರಿಂದಾಗಿ ಪ್ರಮಾದಗಳುಂಟಾಗುವ ಅವಕಾಶವಿದೆ. ಜೊತೆಗೇ ಹೆಚ್ಚು ಹಣವನ್ನೂ ವಸೂಲು ಮಾಡುತ್ತಿದ್ದಾರೆ.

**ತಿರುಪತಿ - ತಿರುಮಲೆಗಳ ಮಧ್ಯೆ ಸರಾಸರಿ ಐದು ನಿಮಿಷಕ್ಕೆ ಒಂದು ಬಸ್ ಹೊರಡುತ್ತದೆ. ಹಬ್ಬ ಹರಿದಿನ ಉತ್ಸವದ ದಿನಗಳಲ್ಲಿ ನಿಮಿಷಕ್ಕೆ ಒಂದು ಬಸ್ ನಡೆಯುವುದು. ಇದೇ ರೀತಿ ತಿರುಮಲೆಯಲ್ಲಿಯೂ ಈ ಸೌಲಭ್ಯವಿದೆ. ಯಾತ್ರಿಕರಿಗೆ ಬಸ್ ಪ್ರಯಾಣವೇ ಎಲ್ಲ ರೀತಿಯಿಂದ ಶ್ರೇಯಸ್ಕರ, ಸುರಕ್ಷಿತ. ಖಾಸಗೀ ವಾಹನಗಳ ಬಗ್ಗೆ ನಿಗಾ ಇಟ್ಟು ತಕ್ಕ ಕ್ರಮಗಳನ್ನು ತೆಗೆದುಕೊಳ್ಳಲಾಗುವುದು. ಈ ವಿಷಯದಲ್ಲಿ ಯಾತ್ರಿಕರೂ ಸಹಕರಿಸಬೇಕು.**

ಡಯಲ್ ಯುವರ್ ಇ.ಓ. ಕಾರ್ಯಕ್ರಮವು ತಿರುಮಲೆಯ ಯಾತ್ರಿಕರ ಸಾಮೂಹಿಕವಾದ ಸೌಲಭ್ಯಗಳನ್ನು ಹೆಚ್ಚುಗೊಳಿಸಲು ಮತ್ತು ಈಗಿರುವ ಸೌಲಭ್ಯಗಳ ಸಾರ್ಥಕ ನಿರ್ವಹಣೆಯಲ್ಲಿ ಯಾತ್ರಿಕರ ಪ್ರತಿಸ್ಪಂದನೆಯನ್ನು ಗುರುತಿಸಿಕೊಂಡು ಮತ್ತಷ್ಟು ವ್ಯವಸ್ಥಿತವಾಗಿ ಸುಲಲಿತವಾಗಿ ಕೆಲಸ ನಿರ್ವಹಿಸುವ ಉದ್ದೇಶದಿಂದಾಗಿದೆ. ದೇಶವ್ಯಾಪ್ತವಾಗಿ ಹಲವಾರು ಮಂದಿ ಡಯಲ್ ಯುವರ್ ಇ.ಓ. ಕಾರ್ಯಕ್ರಮದಲ್ಲಿ ದೂರವಾಣಿಯಲ್ಲಿ ಮಾತನಾಡುತ್ತಾರೆ. ಡಯಲ್ ಯುವರ್ ಇ.ಓ. ಕಾರ್ಯಕ್ರಮದಲ್ಲಿ ಮಾತನಾಡಬಯಸುವವರು ಸಾಧ್ಯವಾದ ಮಟ್ಟಿಗೂ ವ್ಯಕ್ತಿಗತವಾದ ಪ್ರಶ್ನೆಗಳನ್ನು ಹಾಕದೆ ಇದ್ದರೆ ಒಳ್ಳೆಯದು. ಅವರ ಪ್ರಶ್ನೆಗಳು, ಸಲಹೆ, ಸೂಚನೆಗಳು ಯಾತ್ರಿಕರು ಭಕ್ತರು ಮತ್ತೆಲ್ಲರಿಗೂ ಪ್ರಯೋಜನವಾಗುವಂತಿರಬೇಕು. ದಯವಿಟ್ಟು ಮಾತನಾಡಿ.



## ವೈಭವದ ಪವಿತ್ರೋತ್ಸವಗಳು

ತಿರುಮಲೆಯಲ್ಲಿ ಆಗಸ್ಟ್ 17 ರಿಂದ ಆಗಸ್ಟ್ 20 ರ ವರೆಗೆ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ವಾರ್ಷಿಕ ಪವಿತ್ರೋತ್ಸವ ಘನವಾಗಿ ನಡೆಯಿತು. ತಿರುಮಲೆಯ ಆಲಯದಲ್ಲಿ ನಡೆಯುವ ನಿತ್ಯೋತ್ಸವ ವಾರೋತ್ಸವ, ಪಕ್ಷೋತ್ಸವ, ಮಾಸೋತ್ಸವ, ವರ್ಷೋತ್ಸವಗಳಲ್ಲಿಯೂ ದಿನನಿತ್ಯದ ಸೇವಾರ್ಚನಾ ವಿಧಿಗಳಲ್ಲಿಯೂ ಯಾವುದೇ ರೀತಿಯ ಅನವಧಾನ, ಅತಿವಿಶ್ವಾಸಗಳಿಂದಾಗಿ ನ್ಯೂನತೆ, ಕೊರತೆಗಳುಂಟಾಗಿದ್ದಲ್ಲಿ ಆ ದೋಷ ನಿವಾರಣೆಗಾಗಿ ಮಾಡತಕ್ಕ ಆಗಮೋಕ್ತ ಉತ್ಸವ ಪವಿತ್ರೋತ್ಸವ. ಈ ಬಗ್ಗೆ ಶಾಸನೋಕ್ತವಾದ ವಿವರಗಳನ್ನು ಆಗಸ್ಟ್ ಸಪ್ತಗಿರಿಯಲ್ಲಿ ಪ್ರಕಟಪಡಿಸಲಾಗಿದೆ.

ಅದರಂತೆ ಆಲಯದಲ್ಲಿ ಹದಿನೇಳರದು ಶನಿವಾರ ಅಂಕುರಾರ್ಪಣೆಯಾಯಿತು. ನಂತರ ಭಾನುವಾರ ಪವಿತ್ರ ಪ್ರತಿಷ್ಠೆಯಾಯಿತು. ಸೋಮವಾರ ಪವಿತ್ರ ಸಮರ್ಪಣೆಯಾಯಿತು. ರೇಷ್ಮೆಯ ದಾರಗಳಿಗೆ ಹಸಿರು ಹಳದಿ ಕೇಸರಿ ನೀಲಿ ರಂಗುಗಳನ್ನು ಮಿಲಾಯಿಸಿ ಮಾಡುವ ಪವಿತ್ರಗಳನ್ನು ಮಾಲೆಯೋಪಾದಿಯಲ್ಲಿ ಕಟ್ಟಿ ಸ್ವಾಮಿಯ ಉತ್ಸವ ವಿಗ್ರಹಗಳಿಗೆ ಸಮರ್ಪಿಸಲಾಯಿತು. ಆಗಸ್ಟ್ 20 ರಂದು ಮಂಗಳವಾರ ತ್ರಯೋದಶಿಯಂದು ಯಜ್ಞದ ಪೂರ್ಣಾಹುತಿಯಾಗಿ, ಉತ್ಸವರುಗಳಿಗೆ ಸ್ನಪನ ತಿರುಮಂಜನವನ್ನು ನಡೆಸಲಾಯಿತು.

# ವಾರ್ತಾಲಹರಿ

ತತ್ಸಂದರ್ಭದಲ್ಲಿ ಧ್ವಜಸ್ತಂಭ ಬಲಿಪೀಠಗಳಿಗೆ ವಿಶೇಷ ಅಲಂಕಾರವಾಗಿ, ಮೂಲವರಿಗೆ, ಉತ್ಸವಮೂರ್ತಿಗಳಿಗೆ ವಿಶೇಷ ಆಭರಣಗಳ ಅಲಂಕಾರವಾಗಿ ಶೋಭಾಯಮಾನ ವಾಗಿರು ವಂತೆ ಮಾಡಲಾಯಿತು. ಸಂಜೆ ಶ್ರೀ ಮಲೆಯಪ್ಪಸ್ವಾಮಿ ಶ್ರೀದೇವಿ ಭೂದೇವಿ ಯವರು ರಥಬೀದಿಯಲ್ಲಿ ಮೆರವಣಿಗೆ ಬಂದು ಭಕ್ತರನ್ನು ಆಶೀರ್ವದಿಸಿದರು.

ಕಾರ್ಯಕ್ರಮದಲ್ಲಿ ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಜೆ.ಇ.ಓ. ಶ್ರೀ ಪಿ. ಬಾಲಸುಬ್ರಹ್ಮಣ್ಯಂ, ಆಲಯ ಸ್ಪೆಷಲ್‌ಗ್ರೇಡ್ ಡೆ.ಇ.ಓ. ಶ್ರೀ ಎಸ್. ಕೃಷ್ಣಾರೆಡ್ಡಿ, ಆಲಯ ಪೇಷ್ಕಾರ್ ಶ್ರೀ ಸಿ. ಕಪಿಲಮುನಿ, ಪೋಟು ಎ.ಇ.ಓ. ಶ್ರೀ ಜಗನ್ನಾಥಂ, ಮುಂತಾದವರು ಭಾಗವಹಿಸಿದ್ದರು.

ಈ ಪವಿತ್ರೋತ್ಸವಗಳಲ್ಲಿ 7500 ರೂಪಾಯಿಗಳ ಆರ್ಜಿತ ಶುಲ್ಕ ನೀಡಿ ಐದುಮಂದಿ ಭಾಗವಹಿಸುವ ಅವಕಾಶವಿದ್ದಿತು.

### ತಿರುಮಲೆಯಲ್ಲಿ ಮುಖ್ಯಮಂತ್ರಿ

ತಿರುಮಲೆಗೆ ಈಚೆಗೆ ಆಗಮಿಸಿದ ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ನಾರಾಚಂದ್ರಬಾಬುನಾಯುಡು ಅವರು ಕುಟುಂಬ ಸಮೇತರಾಗಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಮುಖ್ಯಮಂತ್ರಿಗಳನ್ನು ತಿ.ತಿ.ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಜೆ.ಇ.ಓ. ಶ್ರೀ ಪಿ. ಬಾಲಸುಬ್ರಹ್ಮಣ್ಯಂ ಮೊದಲಾದವರು ಸ್ವಾಗತಿಸಿದರು. ಕಾರ್ಯನಿರ್ವಹಣಾಧಿಕಾರಿ ಮುಖ್ಯಮಂತ್ರಿ ಗಳಿಗೆ ಸ್ವಾಮಿ ಪ್ರಸಾದಗಳನ್ನು ನೀಡಿದರು.

ಮುಖ್ಯಮಂತ್ರಿಗಳು ತಿರುಪತಿಯಲ್ಲಿ ಹಲವು ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಉಪನ್ಯಾಸ ನೀಡಿದರು. ಶ್ರೀ ಪದ್ಮಾವತೀ ಮಹಿಳಾ ಕಾಲೇಜಿನ ಸುವರ್ಣ ಮಹೋತ್ಸವ ಸಮಾರಂಭದಲ್ಲಿಯೂ ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ತಿರುಪತಿ ಚಿತ್ತೂರು ಮಾರ್ಗದಲ್ಲಿ ಎಸ್.ವಿ. ಡೈರಿಫಾರಂನಿಂದ ಪುದಿಪಟ್ಲ ವರೆಗಿನ ತಿ.ತಿ.ದೇ. ಏರ್ಪಾಡಿನ ರಸ್ತೆ ದೀಪಗಳನ್ನು ಆರಂಭಿಸಿಕೊಟ್ಟರು. ತಿ. ತಿ. ದೇವಸ್ಥಾನಗಳ ತಿರುಮಲೆಯ ಬ್ರಹ್ಮೋತ್ಸವದ ಭಿತ್ತಿಪತ್ರಗಳನ್ನು ಪರಿಶೀಲಿಸಿದರು.

### ತಿರುಮಲೆ - ತಿರುಪತಿ ದೇವಸ್ಥಾನಗಳು

## ಪವಿತ್ರೋತ್ಸವ ಆರ್ಜಿತ ಸೇವೆಯ ಶುಲ್ಕ ಪರಿಷ್ಕರಣ

ತಿರುಮಲೆಯ ಆಲಯದಲ್ಲಿ ವಾರ್ಷಿಕವಾಗಿ ಮೂರುದಿನದ ಪವಿತ್ರೋತ್ಸವದ ಶುಲ್ಕವನ್ನೂ, ಈ ಆರ್ಜಿತಸೇವೆ ಮಾಡಿಸುವ ಗೃಹಸ್ಥರಿಗೆ ನೀಡುವ ಸೌಲಭ್ಯಗಳನ್ನೂ, ಈ ಸೇವೆಗೆ ಹೆಚ್ಚುತ್ತಿರುವ ಬೇಡಿಕೆಯ ದೃಷ್ಟಿಯಿಂದಲೂ ಈ ಸೇವೆ ನಡೆಯುವ ಸ್ಥಳದಲ್ಲಿ ಹೆಚ್ಚು ಮಂದಿಗೆ ಅವಕಾಶವಿಲ್ಲದಂತಿರುವುದರಿಂದಾಗಿಯೂ ಈಗಿರುವ ಶುಲ್ಕವನ್ನೂ, ಪ್ರವೇಶಾವಕಾಶ ವನ್ನೂ ತಗ್ಗಿಸಲಾಗಿದೆ. ಅದರಂತೆ ಈ ಆರ್ಜಿತ ಸೇವೆಯ ಶುಲ್ಕವನ್ನು ರೂ. 7,500/- ರಿಂದ ರೂ. 5,000/- ಕ್ಕೆ ಇಳಿಸಲಾಗಿದೆ. ಈ ಮೊದಲು ಈ ಸೇವೆಗೆ ಐದು ಮಂದಿಯ ಪ್ರವೇಶವಿದ್ದರೆ ಈಗ ಇಬ್ಬರನ್ನು ಮಾತ್ರವೇ ಅನುಮತಿಸಲಾಗುವುದು. ಈ ಸೇವೆಯನ್ನು ಮಾಡಿಸುವ ಗೃಹಸ್ಥರಿಗೆ (ಇಬ್ಬರಿಗೆ ಮಾತ್ರ) ಅರ್ಚನಾನಂತರದರ್ಶನ ಹಾಗೂ ಪೂರ್ಣಾಹುತಿಗಳಿಗೆ ಪ್ರವೇಶವನ್ನು ನೀಡಲಾಗುವುದು. ಈಗಿರುವ ಪ್ರಸಾದಗಳಿಗೆ ಬದಲಾಗಿ ಹತ್ತು ಕಿರಿಯಲಾಡು ಐದು ವಡೆಗಳನ್ನು ನೀಡಲಾಗುವುದು. ಜೊತೆಗೇ ಪವಿತ್ರವನ್ನೂ ಜರಿಶಾಲುವನ್ನೂ ನೀಡಲಾಗುವುದು. ಈ ಬದಲಾವಣೆ 15-9-2002 ರಿಂದ ಜಾರಿಗೆ ಬಂದಿದೆಯಾಗಿ ಯಾತ್ರಿಕ ಭಕ್ತರು ಗಮನಿಸಿ ಈ ಸದುಪಾಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ.

## ವರುಣ ಜಪ

ಆಗಸ್ಟ್ ತಿಂಗಳಿನಲ್ಲಿ ಸ್ವಾಮಿ ಪುಷ್ಕರಿಣಿಯಲ್ಲಿ ಐದು ದಿನಗಳ ಕಾಲ ವೇದಮಂತ್ರೋಚ್ಚಾರಣೆಗಳ ಮಧ್ಯೆ ವರುಣ ಜಪ ವೈಭವದಿಂದ ನಡೆಯಿತು. ವರುಣದೇವನ ಕರುಣೆಯಾಗಿ ವರ್ಷದ ಪ್ರಾರ್ಥನೆಯಾಗಿ ವರುಣ ಜಪ ನಡೆಯಿತು.

ವರುಣ ಜಪದ ಎರಡನೆಯ ದಿನವೇ ಸ್ವಲ್ಪ ಮಳೆಯಾಗಿದ್ದು ಉಂಟಾದರೂ ಮತ್ತೆ ವರುಣ ಜಪ ಮುಗಿಯುವವರೆಗೆ ಆಗಲಿಲ್ಲವೆಂಬುದೂ ಆಮೇಲೆ ಸ್ವಲ್ಪ ಹನಿಯಿತೆಂಬುದೂ ವರದಿಯಾಗಿದೆ. ವೇದಪಂಡಿತರು ಶ್ರೀ ಚಂದ್ರಶೇಖರ ಘನಪಾಟಿ, ಶ್ರೀ ಚಂದ್ರಮೌಳಿಯವರ ಜೊತೆಗೆ ಇತರ ಪಂಡಿತರು ಸೇರಿ ಜಪದಲ್ಲಿ ಭಾಗವಹಿಸಿದ್ದರು. ತಿ.ತಿ.ದೇ. ಇ.ಓ. ಡಾ|| ಪಿ. ಕೃಷ್ಣಯ್ಯ ಜೆ.ಇ.ಓ. ಶ್ರೀ ಪಿ. ಬಾಲಸುಬ್ರಹ್ಮಣ್ಯಂ, ಡೆ.ಇ.ಓ. (ಸ್ಪೆಷಲ್‌ಗ್ರೇಡ್) ಶ್ರೀ ಎಸ್. ಕೃಷ್ಣಾರೆಡ್ಡಿ ಮೊದಲಾದವರು ಭಾಗವಹಿಸಿದ್ದರು.

## ಸ್ವಾಮಿಗೆ ಧ್ವನಿ ಸುರುಳಿ ಸಮರ್ಪಣೆ

ಪ್ರಮುಖ ಸಂಗೀತ ಕಲಾವಿದೆ ಶ್ರೀಮತಿ ತೇಜೇಶ್ವರಿ ಅವರು ತಾವು ಹಾಡಿ ಸಿದ್ಧಪಡಿಸಿದ 'ಶ್ರೀ ವೆಂಕಟೇಶ್ವರ ಅಷ್ಟೋತ್ತರ' ಹಾಗೂ 'ಶ್ರೀಸ್ತುತಿ' ಧ್ವನಿಸುರುಳಿಗಳನ್ನು ಸಕಲ ಹಕ್ಕುಗಳ ಸಹಿತ ಶ್ರೀ ವೆಂಕಟೇಶ್ವರಸ್ವಾಮಿಗೆ ನೀಡಿದರು. ಮ್ಯಾಗ್ನ ಸೌಂಡ್ ಸಂಸ್ಥೆ ತಯಾರಿಸಿದ ಈ ಕ್ಯಾಸೆಟ್‌ಗಳನ್ನು ತಿರುಮಲೆಯ ಕಾರ್ಯನಿರ್ವಹಣಾಧಿಕಾರಿಯವರ ಶಿಬಿರ ಕಚೇರಿಯಲ್ಲಿ, ಡಾ|| ಪಿ. ಕೃಷ್ಣಯ್ಯ ಅವರು ಬಿಡುಗಡೆ ಮಾಡಿದರು. ಈ ಕ್ಯಾಸೆಟ್‌ಗಳ ಒಂದು ವೈಶಿಷ್ಟ್ಯವೆಂದರೆ ಇವು ತಮಿಳು, ತೆಲುಗು, ಕನ್ನಡ, ಹಿಂದಿ, ಆಂಗ್ಲ ಭಾಷೆಯ ವ್ಯಾಖ್ಯಾನಗಳನ್ನೂ ಹೊಂದಿರುವುದಾಗಿವೆ. ಧ್ವನಿಸುರುಳಿಗಳ ಮೊದಲ ಪ್ರತಿಗಳನ್ನು ಪಡೆದ ಅನ್ನಮಾಚಾರ್ಯ ಪ್ರಾಜೆಕ್ಟ್ ನಿರ್ದೇಶಕರಾದ ಡಾ|| ಮೇಡಸಾನಿ ಮೋಹನ್ ಅವರು ವರಾಹಪುರಾಣದ ಪದ್ಮಸರೋವರ ಮಹಿಮೆಯ ಭಾಗವಾದ ಶ್ರೀಸ್ತುತಿಯನ್ನೂ, ಶ್ರೀ ವೆಂಕಟೇಶ್ವರ ಸ್ವಾಮಿಯ 108 ನಾಮಗಳಿಂದ ಕೂಡಿದ ಅಷ್ಟೋತ್ತರವನ್ನೂ ಸಂಗೀತಕ್ಕೆ ಅಳವಡಿಸಿ ರಾಗಯುಕ್ತವಾಗಿ ಹಾಡಿರುವುದು ಅವರ ಭಕ್ತಿಗೂ ವಿದ್ವತ್ತಿಗೂ ದ್ಯೋತಕವಾಗಿದೆಯೆಂದು ನುಡಿದರು.

ಒಂದೇ ಬಾರಿಗೆ ಐದು ಭಾಷೆಗಳ ವ್ಯಾಖ್ಯಾನದ ಧ್ವನಿಸುರುಳಿಯ ತಯಾರಿಕೆ ಒಂದು ರೀತಿಯ ವಿಶಿಷ್ಟ ಅನುಭವವನ್ನುಂಟುಮಾಡುವಂತಹುದೆಂದೂ ಇದಕ್ಕಾಗಿ ವೇದಪಾಠಶಾಲೆಯ ಅಧ್ಯಾಪಕರ ಪಂಡಿತರ ಸೂಚನೆಯ ಮೇರೆಗೆ ಸಾಧನೆಮಾಡಿ ಎರಡು ವರ್ಷಕಾಲ ಪ್ರಯತ್ನಿಸಿ ನಂತರ ಹಾಡಿದ್ದೇನೆ ಎಂದು ಗಾಯಕಿ ತಿಳಿಸಿದರು.

## ಕಾರ್ಯಕ್ರಮಗಳ ನಿರ್ವಹಣೆಗೆ ಪ್ರತ್ಯೇಕ ಸಲಹಾ ಸಮಿತಿಗಳು

ತಿ. ತಿ. ದೇವಸ್ಥಾನಗಳ ವಿವಿಧ ವಿಭಾಗಗಳ ಶಾಖೆಗಳ ಸುಗಮವೂ ಸುಸೂತ್ರವೂ ಆದ ಕಾರ್ಯಕ್ರಮ ನಿರ್ವಹಣೆಯಲ್ಲಿ ಅನುಕೂಲವಾಗುವಂತೆ, ಕಾರ್ಯಚಟುವಟಿಕೆಯಲ್ಲಿ ಹೆಚ್ಚಿನ ಗಮ್ಯಾಕಾಂಕ್ಷೆ ಉಂಟಾಗುವಂತೆ ಸಲಹಾ ಸಮಿತಿಗಳನ್ನು ಏರ್ಪಾಡು ಮಾಡಲಾಗಿದೆ. ತಿ. ತಿ. ದೇವಸ್ಥಾನಗಳ ಧರ್ಮಕರ್ತರ ಮಂಡಳಿಯು ಸೆಪ್ಟಂಬರ್ 2 ರಂದು ತಿರುಮಲೆಯ ಅನ್ನಮಯ್ಯ ಭವನದಲ್ಲಿ ಸಮಾವೇಶವಾಗಿ ಈ ಬಗ್ಗೆ ತೀರ್ಮಾನವನ್ನು ತೆಗೆದುಕೊಂಡಿದೆಯೆಂದು ತಿ.ತಿ.ದೇ. ಧರ್ಮಕರ್ತರ ಮಂಡಲಿಯ ಅಧ್ಯಕ್ಷ ಶ್ರೀ ಪಪ್ಪಲ ಚಲಪತಿರಾವ್ ಅವರು ಈ ಬಗ್ಗೆ ಪತ್ರಿಕಾಗೋಷ್ಠಿಯಲ್ಲಿ ವಿವರಗಳನ್ನು ನೀಡಿದರು.

ತಿ.ತಿ.ದೇ. ಅಧೀನಕ್ಕೆ ಬಂದಿರುವ ಎಲ್ಲ ಆಸ್ಪತ್ರೆಗಳ ನಿರ್ವಹಣೆಯ ಸಲುವಾಗಿ ಒಂದು ಸಲಹಾ ಸಮಿತಿಯನ್ನು ನಿಯಮಿಸಲಾಗಿದೆ. ಈ ಸಲಹಾ ಸಮಿತಿಯ ನೇತೃತ್ವ ತಿ.ತಿ.ದೇ. ಅಧ್ಯಕ್ಷರು ಶ್ರೀ ಪಪ್ಪಲ ಚಲಪತಿರಾವ್ ಅವರದು. ಸದಸ್ಯರಾಗಿ ಧರ್ಮಕರ್ತರ ಮಂಡಲಿಯ ಇಬ್ಬರು ಸದಸ್ಯರು - ಡಾ|| ಗೋಗಿನೇನಿ ಉಮ, ಶ್ರೀ ಶ್ರೀನೀವಾಸಲು, ತಿ.ತಿ.ದೇ. ಚೀಫ್ ಅಕೌಂಟ್ಸ್ ಆಫೀಸರ್ ಶ್ರೀ ಈಶ್ವರಯ್ಯನವರುಗಳಿದ್ದು ಸಮಿತಿಯ ಸಂಚಾಲಕರು ತಿ.ತಿ.ದೇ ಕಾರ್ಯನಿರ್ವಹಣಾಧಿಕಾರಿಗಳು ಡಾ|| ಪಿ. ಕೃಷ್ಣಯ್ಯ. ಇದೇ ರೀತಿಯಲ್ಲಿ ಕೇಂದ್ರೀಯ ಪುಸ್ತಕ ಭಂಡಾರದ ಸಲಹಾ ಸಮಿತಿಯಲ್ಲಿ ಧರ್ಮಕರ್ತರ ಮಂಡಲಿಯ ಸದಸ್ಯರಾದ ಶ್ರೀ ಮನೋಜಕುಮಾರ್ ಸಂತಾಲಿಯ, ಡಾ|| ವಿ. ಆರ್. ಪಂಚಮುಖಿ, ಡಾ|| ಡಿ. ರಾಮನಾಯುಡು, ಶ್ರೀ ಸೂರ್ಯನಾರಾಯಣ ಅವರುಗಳಿರುವರು. ಧರ್ಮಪ್ರಚಾರ ಪರಿಷತ್ ಸಲಹಾ ಸಮಿತಿಯಲ್ಲಿ ಧರ್ಮಕರ್ತರ ಮಂಡಲಿಯವರಾದ ಶ್ರೀ ಡಿ.ಕೆ. ಆದಿಕೇಶವುಲು, ಡಾ|| ವಿ.ಆರ್. ಪಂಚಮುಖಿ ಅವರುಗಳಿರುವರು.

ಆಗಮ ಶಾಸ್ತ್ರ ಸಲಹಾ ಮಂಡಳಿಯಲ್ಲಿ ಇದುವರೆಗೆ ಖಾಲಿಯಾಗಿದ್ದ ಮೂರು ಸದಸ್ಯರ ಸ್ಥಾನದಲ್ಲಿ ಶ್ರೀ ಎಸ್.ಎ.ಕೆ. ಸುಂದರವದನ್, ಶ್ರೀ ಯು.ವಿ.ಎಸ್.ಆರ್. ಜಗನ್ನಾಥಾಚಾರ್ಯುಲು (ದ್ವಾರಕಾ ತಿರುಮಲ) ಶ್ರೀ ನಲ್ಲೂರಿ ಸೀತಾರಾಮಾಚಾರ್ಯುಲು (ಬಾಪಟ್ಲ) ಅವರುಗಳು ನಿಯಮಿತರಾಗಿದ್ದಾರೆ.

ಇವೇ ಅಲ್ಲದೆ ಕುಮಾರಧಾರಾ ಪ್ರಾಜೆಕ್ಟ್ ಸಲಹಾ ಸಮಿತಿಯಲ್ಲಿ ನಿವೃತ್ತ ಇಂಜನೀಯರ್‌ಗಳು ಶ್ರೀ ಜೆ. ಪುರುಷೋತ್ತಮ್, ಶ್ರೀ ಆರ್. ಕೊಂಡಲರಾವ್ ಅವರ ಜೊತೆಗೆ ಜಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ ನಿರ್ದೇಶಕರು. ಐ ಅಂಡ್ ಪಿ.ಡಿ. ಚೀಫ್ ಇಂಜನಿಯರ್, ಸಿ.ಓ.ಡಿ. ಚೀಫ್ ಇಂಜನೀಯರ್‌ಗಳು ಆಯ್ಕೆಯಾಗಿದ್ದಾರೆ. ಈ ಸಲಹಾಸಮಿತಿಯ ಸಂಚಾಲಕರಾಗಿ ತಿ.ತಿ.ದೇ., ಚೀಫ್ ಇಂಜನಿಯರ್ ಶ್ರೀ ಸತ್ಯನಾರಾಯಣ ರಾಜು ಅವರು ಕಾರ್ಯನಿರ್ವಹಿಸುವರು.

## ಶ್ರೀ ವೆಂಕಟೇಶ್ವರ ಗೋಸಂರಕ್ಷಣ ಟ್ರಸ್ಟ್ ಆರಂಭ

ಸೆಪ್ಟಂಬರ್ 22 ರಂದು ತಿರುಪತಿಯ ಶ್ರೀ ಎಸ್. ವಿ. ಡೈರಿ ಫಾರಂ ಆವರಣದಲ್ಲಿ ಕಂಚಿ ಕಾಮಕೋಟಿ ಪೀಠದ ಶ್ರೀ ಶ್ರೀ ಜಯೇಂದ್ರ ಸರಸ್ವತಿಯವರ ಸಮಕ್ಷಮದಲ್ಲಿ ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಪಪ್ಪಲ



## ಯಾತ್ರಿಕ ಭಕ್ತರಲ್ಲಿ.....

# ವಿನಂತಿ

## "ಡಯಲ್ - ಯುವರ್ ಇ.ಓ."

ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

***ದೂರವಾಣಿ ಸಂಖ್ಯೆ - 08574-77261.***

**ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು**

**ತಮ್ಮ ಸುಲಭತರ ಯಾತ್ರೆ ಕೈಗೂಡಲು ದಯವಿಟ್ಟು ಮಾತನಾಡಿ.**

## ಎಸ್. ಬಿ. ರಘುನಾಥಾಚಾರ್ಯರ ನಿಧನ



ಖ್ಯಾತ ಸಂಸ್ಕೃತ ವಿದ್ವಾಂಸರೂ ಕೇಂದ್ರೀಯ ಸಂಸ್ಕೃತ ವಿದ್ಯಾಪೀಠದ ನಿವೃತ್ತ ಕುಲಪತಿಗಳು ಆದ ಪ್ರಾಚಾರ್ಯ ಡಾ|| ಎಸ್. ಬಿ. ರಘುನಾಥಾಚಾರ್ಯರವರು 17-9-2002 ರಂದು ಮಂಗಳವಾರ, ತಿರುಪತಿಯಲ್ಲಿ ಮೆದುಳು ರಕ್ತಸ್ರಾವದಿಂದಾಗಿ ಮರಣ ಹೊಂದಿದರೆಂದು ತಿಳಿಸಲು ಸಪ್ತಗಿರಿ ವಿಷಾದಿಸುತ್ತದೆ.

ಭಾಗವತುಲ ರಘುನಾಥಾಚಾರ್ಯರು ಎಸ್.ವಿ. ವಿಶ್ವವಿದ್ಯಾಲಯದ ಸಂಸ್ಕೃತ ಪ್ರಾಧ್ಯಾಪಕರಾಗಿ ಕೆಲಸಮಾಡುತ್ತಿದ್ದರು. ಮಧ್ವಾಚಾರ್ಯರ ಋಗ್‌ಭಾಷ್ಯ ದೀಪಿಕೆಯನ್ನು ಸಂಪಾದಿಸಿ ಪ್ರಕಟಿಸಿದ್ದರು. ಹಲವು ಹನ್ನೊಂದು ಪುಸ್ತಕ ಪ್ರಕಟಣ ಯೋಜನೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಭಾರತೀಯ ಸಂಸ್ಕೃತಿಯ ಬಗ್ಗೆ ಹಲವು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಅವರ ''ನಮ್ಮ ಸಮಸ್ಯೆಗಳಿಗೆ ಭಗವದ್ಗೀತೆ ಪರಿಷ್ಕಾರ'' ಪುಸ್ತಕ ಹಲವು ಭಾಷೆಗಳಿಗೆ ಅನುವಾದವಾಗಿ, ಜನಪ್ರಿಯವಾಗಿ ಹಲವು ಮುದ್ರಣಗಳನ್ನು ಕಂಡಿದೆ. ತೆಲುಗಿನ ಆರ್ಷವಿಜ್ಞಾನಸರ್ವಸ್ವಂ, ಬಾಲಭಾರತಿ ಮುಂತಾದ ಪ್ರಕಟಣೆಗಳ ಸಂಪಾದಕರಾಗಿಯೂ ಪ್ರಸಿದ್ಧರು. ತಿ.ತಿ.ದೇ.ಗಳ ಪ್ರಕಟಣ ವಿಭಾಗದಲ್ಲಿಯೂ ಪುಸ್ತಕ ನೆರವು ನಿರ್ಣಾಯಕ ಸಂಘದಲ್ಲಿಯೂ ಸಲಹಾಗಾರರಾಗಿ ಕೆಲಸಮಾಡಿದ್ದರು. ತಿರುಮಲೆಯಲ್ಲಿ ವೇದ ಸಮ್ಮೇಳನಗಳ ಸಂಚಾಲಕರಾಗಿ ಪ್ರಸಿದ್ಧರಾದವರು. ಅವರ ನೆನಪಿನಲ್ಲಿ ಸಪ್ತಗಿರಿ ನಮಿಸುತ್ತದೆ. ಸಂ||

ಚಲಪತಿರಾವ್ ಅವರ ಅಧ್ಯಕ್ಷತೆಯಲ್ಲಿ ತಿ. ತಿ. ದೇವಸ್ಥಾನಗಳ ಗೋ ಸಂರಕ್ಷಣ ಟ್ರಸ್ಟ್ ಅನ್ನು ಆರಂಭಿಸಲಾಯಿತು. ಶ್ರೀ ವೆಂಕಟೇಶ್ವರ ಭಕ್ತ ಸಮಾಜದ ಅಧ್ಯಕ್ಷರು ಶ್ರೀ ವಾಡ್ರೇವು ಗವರರಾಜು ಅವರೂ ಕಂಚಿ ಪೀಠದ ಶ್ರೀ ಶ್ರೀ ವಿಜಯೇಂದ್ರ ಸರಸ್ವತಿಸ್ವಾಮಿಗಳು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಜೆ.ಇ.ಓ. ಶ್ರೀ ಆರ್. ಅಪ್ಪಾರಾವು, ಧರ್ಮಕರ್ತರ ಮಂಡಳಿಯ ಸದಸ್ಯರು ಶ್ರೀ ಎಂ. ಸೂರ್ಯನಾರಾಯಣ, ಡೈರಿಫಾರಂ ನಿರ್ದೇಶಕರು ಡಾ|| ಪಿ. ಕೊಂಡಾರೆಡ್ಡಿ ಅವರುಗಳು ಭಾಗವಹಿಸಿದ್ದರು.

ಹಾಲು ನೀಡದ ಹಸುಗಳನ್ನು ಕಸಾಯಿಗಳಿಗೆ ಕೊಡುವ ದೌರ್ಭಾಗ್ಯ ಪರಿಸ್ಥಿತಿಯಿಂದ ದೂರವಾಗಿ ಹಸುವನ್ನು ಬದುಕಿರುವವರೆಗೆ ನೋಡಿಕೊಂಡು ಪಾಲಿಸಲು ತಕ್ಕ ವಾತಾವರಣ ನಿರ್ಮಾಣವಾಗಬೇಕಾದ್ದು ಅಗತ್ಯ - ಎಂದು ಕಂಚಿಯ ಶ್ರೀ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಜೀ ಅವರು ಕರೆ ನೀಡಿದರು. ಸರ್ವದೇವತಾ ರೂಪಳೂ, ಲಕ್ಷ್ಮೀದೇವಿಯ ಪ್ರತಿರೂಪವೂ ಆದ ಗೋಮಾತೆಯನ್ನು ಕಾಡಿಗಟ್ಟುವುದನ್ನು ಊಹಿಸುವುದಾದರೂ ಹೇಗೆ ಎಂದು ಕೇಳಿದ ಸ್ವಾಮಿಜಿ ಅವರು ಗೋವನ್ನು ರಾಷ್ಟ್ರೀಯ ಪ್ರಾಣಿಯನ್ನಾಗಿ ಗುರುತಿಸಿ ಅದರ ರಕ್ಷಣೆಗೆ ಎಲ್ಲ ಕ್ರಮಗಳನ್ನು ಕೈಗೊಳ್ಳುವಂತೆ ತಾವು ಸರ್ಕಾರಕ್ಕೆ ಸೂಚಿಸಿರುವುದಾಗಿ ತಿಳಿಸುತ್ತ ಟಾಟಾ ಕನ್ಸಲ್ಟೆನ್ಸಿಯವರ ನೆರವಿನಿಂದ ಗೋವಿನ ಕ್ಷೀರೋತ್ಪನ್ನ ಸಾಮರ್ಥ್ಯ ವ್ಯವಧಿಯನ್ನು ಹೆಚ್ಚಿಸುವ ಸಂಶೋಧನೆಯನ್ನು ನಡೆಸುತ್ತಿರುವುದಾಗಿಯೂ ತಿಳಿಸಿದರು.

ಟ್ರಸ್ಟ್ ಆರಂಭದ ದ್ಯೋತಕವಾಗಿ ಗೋಪೂಜೆ, ಶ್ರೀಕೃಷ್ಣಪೂಜೆಗಳು ನಡೆದವು. ಅಧ್ಯಕ್ಷ ಶ್ರೀ ಪಪ್ಪಲ ಚಲಪತಿರಾವ್ ಅವರು ಗೋವಿನ ಪ್ರಾಧಾನ್ಯವನ್ನು ತಿಳಿಸಿದರು. ಶ್ರೀ ವಾಡ್ರೇವು ಗವರರಾಜು ಅವರು ತಾವು ಸಂಗ್ರಹಿಸಿದ್ದ ಧನವನ್ನು ಸ್ವಾಮಿಜೀಯವರ ಮೂಲಕವಾಗಿ, ತಿ.ತಿ.ದೇ. ಗಳಿಗೆ ತಲುಪಿಸಿದರು.

★★★★★

Edited and Published on behalf T. T. Devasthanams by Dr. N. S. Ramamuthy and Printed at T. T. D. Press
by I. Parvateeswara Rao, B.A., L.P.T., Manager, T.T.D. Press, Tirupati - 517 507.



ಪ್ರಾಣದಾನ ಟ್ರಸ್ಟ್‌ಗೆ
ವಂತಿಗೆ ಸ್ವೀಕರಿಸುತ್ತ
ಕಾರ್ಯನಿರ್ವಹಣಾಧಿಕಾರಿ.



ಸ್ವಾಮಿಗೆ ಧ್ವನಿಸುರುಳಿ ಸಮರ್ಪಿಸುತ್ತ
ಶ್ರೀಮತಿ ತೇಜೇಶ್ವರಿ.



ಅಮರರಾಜ ಸಂಸ್ಥೆಯವರು
ಬ್ಯಾಟರಿ ನೀಡುತ್ತಿರುವಿಕೆ.